ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳ ಪೋಷಕರಿಗೆ ತರಬೇತಿ ಕಾರ್ಯಕ್ರಮ



# ಮಾತು - ಭಾಷೆಯ ತೊಂದರೆಗಳು







ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ
ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು - 570006

ಪರಿಕಲ್ಪನೆ ಮತ್ತು ಪ್ರಧಾನ ಸಂಪಾದಕರು : ಪ್ರೊ. ಎಂ. ಜಯರಾಮ್

ಪ್ರಕಾಶಕರು: ಪ್ರೊ. ಎಂ. ಜಯರಾಮ್
ನಿರ್ದೇಶಕರು
ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ
ನೈಮಿಷಂ ಆವರಣ, ಮಾನಸಗಂಗೋತ್ರಿ,
ಮೈಸೂರು 6

ಬರವಣಿಗೆ ಹಾಗೂ ಸಂಕಲನ: ಡಾ. ಕೆ. ಎಸ್. ಪ್ರೇಮ
ಡಾ. ಎಂ. ಜಯರಾಮ್

ಪುಸ್ತಕ ವಿನ್ಯಾಸ ಮತ್ತು ತಾಂತ್ರಿಕ ಸಲಹೆ: ಎಂ. ಜಿ. ಮಂಜುಸ್ವಾಮಿ
ಟೀನಾ ಸಹೆಲಾ

ಚಿತ್ರಗಳು: ಜಿ. ವಿ. ಗಣೇಶಯ್ಯ
ಆರ್. ಶ್ರೀನಿವಾಸ್

ಮುಖಪುಟ: ಎಂ. ಜಿ. ಮಂಜುಸ್ವಾಮಿ

ಬೆಲೆ: ರೂ. 50/-

ಬೆಳವಣಿಗೆ ನ್ಯೂನತೆಗಳುಳ್ಳ ಮಕ್ಕಳ ಪೋಷಕರಿಗೆ ತರಬೇತಿ ಕಾರ್ಯಕ್ರಮ

ಭಾಗ-2 ಘಟಕ-1

# ಮಾತು-ಭಾಷೆಯ ತೊಂದರೆಗಳು





ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ

ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು-6



# ನಮ್ಮ ಧ್ಯೇಯ

1966ರಲ್ಲಿ ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸ್ವಾಯತ್ತ ಸಂಸ್ಥೆಯಾಗಿ ಹುಟ್ಟು ಪಡೆದ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಕಳೆದ ನಾಲ್ಕು ದಶಕಗಳಿಂದ ವಾಕ್ ಶ್ರವಣ ನ್ಯೂನತೆಗಳುಳ್ಳ ಜನರಿಗಾಗಿ ಸೇವೆ ಸಲ್ಲಿಸುತ್ತಿದೆ. ಚಿಕಿತ್ಸೆ, ಸಂಶೋಧನೆ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಗಳನ್ನು ಮಾಡಿದೆ.

ನಮ್ಮ ದೇಶದ ಶೇ.10 ರಷ್ಟು ಮಕ್ಕಳು ಒಂದಲ್ಲಾ ಒಂದು ರೀತಿಯ ಮಾತು-ಭಾಷೆ-ಕೇಳುವಿಕೆಯ ತೊಂದರೆಗಳಿಗೆ ತುತ್ತಾಗಿದ್ದಾರೆ ಎಂದು ಅಂಕಿ-ಅಂಶಗಳಿಂದ ತಿಳಿದು ಬರುತ್ತದೆ. ಇಂತಹ ಮಕ್ಕಳನ್ನು ಶೀಘ್ರವಾಗಿ ಗುರುತಿಸಿ, ಭವಿಷ್ಯದಲ್ಲಿ ಅವರಿಗೆ ಸಾಮಾನ್ಯ ಜೀವನ ನಡೆಸಲು ಸಾಧ್ಯವಾಗುವಂತೆ ಚಿಕಿತ್ಸೆ ಹಾಗೂ ತರಬೇತಿ ನೀಡುವುದು ಅತಿ ಅವಶ್ಯಕ. ಆದರೆ ಈ ರೀತಿಯ ಚಿಕಿತ್ಸೆ ಮತ್ತು ತರಬೇತಿ ನೀಡುವ ತಜ್ಞರ ಸಂಖ್ಯೆ ಬಹಳ ಕಡಿಮೆ ಇರುವುದು ವಾಸ್ತವ ಸಂಗತಿ. ಇಂತಹ ವಾಕ್-ಶ್ರವಣ ತಜ್ಞರ ಸೇವೆ ಎಲ್ಲಿ ಬೇಕೋ ಅಲ್ಲಿ ಸಿಗುತ್ತಿಲ್ಲ. ಹಳ್ಳಿಗಳಲ್ಲಿ ಕೆಲಸ ಮಾಡಲು ಮುಂದೆ ಬರುವವರೇ ಇಲ್ಲ. ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ತೊಂದರೆ ಇರುವ ಲಕ್ಷಾಂತರ ಜನರನ್ನು ನಮ್ಮ ಸಲಹೆ ಸೂಚನೆ ಸೇವೆಗಳನ್ನು ಪಡೆಯಲು ನಗರ ಪ್ರದೇಶಗಳಲ್ಲಿ ಇರುವಂತಹ ನಮ್ಮ ಸಂಸ್ಥೆಗಳಿಗೆ ಬನ್ನಿ ಎಂದು ಕರೆಯುವುದು ಸಮಂಜಸವಲ್ಲ. ಆದುದರಿಂದ ಮಾತು-ಕೇಳುವಿಕೆಯ ತೊಂದರೆಗಳಿರುವ ಜನರ ಸುತ್ತಮುತ್ತ ಇರುವ ಸಮುದಾಯದ ಒಂದು ವರ್ಗದ ಜನರನ್ನು ಆರಿಸಿ ಅವರಿಗೆ ಸೂಕ್ತ ತರಬೇತಿ ನೀಡಿದರೆ, ನಮ್ಮ ಗ್ರಾಮೀಣ ಪ್ರದೇಶದ ಜನರ ಬವಣೆ ಸ್ವಲ್ಪವಾದರೂ ನೀಗಬಹುದೆಂದು ನಮ್ಮ ಅನಿಸಿಕೆ.

ಈ ದಿಕ್ಕಿನಲ್ಲಿ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಪೋಷಕರನ್ನು ಗಮದಲ್ಲಿಟ್ಟುಕೊಂಡು ದೇಶದಲ್ಲಿಯೇ ಪ್ರಪ್ರಥಮ ಬಾರಿಗೆ ಒಂದು ವಿಶೇಷ ತರಬೇತಿ ಕಾರ್ಯಕ್ರಮವನ್ನು ರೂಪಿಸಿದೆ. ಈ ತರಬೇತಿ ಕಾರ್ಯಕ್ರಮವು ಅಂಚೆ ತೆರಪಿನ ಶಿಕ್ಷಣದ ಮೂಲಕ ನಡೆಯುವಂತೆ ಯೋಜಿಸಲಾಗಿದ್ದು. ಸಂವಹನ ನ್ಯೂನತೆಯ ಮಕ್ಕಳ ತರಬೇತಿಯಲ್ಲಿ ಒಂದು ಹೊಸ ಆಯಾಮವನ್ನು ಹುಟ್ಟುಹಾಕಿದೆ. ಶ್ರವಣದೋಷ, ಮಾತು-ಕೇಳುವಿಕೆಯ ದೋಷವಿರುವ 'ಪ್ರತಿಯೊಂದು ಮಗುವಿಗೂ ಈ ಅರೈಕೆ/ಸೇವೆ ತಲುಪುವಂತಾಗಬೇಕು. ಅವರೆಲ್ಲರ ನಾಳೆಯ ಬದುಕು ಹಸನಾಗಬೇಕು' ಎಂಬುದೇ ನಮ್ಮ ಕನಸು ಮತ್ತು ಧ್ಯೇಯ.

ಮಾತು-ಕೇಳುವಿಕೆಯ ನ್ಯೂನತೆಯಿರುವ ಮಕ್ಕಳ ತರಬೇತಿಗಾಗಿ ಪೋಷಕರಿಗೆ ರೂಪಿಸಿರುವ ಈ ಕಾರ್ಯಕ್ರಮವು ಹಲವು ಅಂಶಗಳಲ್ಲಿ ಪೋಷಕರಿಗೆ ತರಬೇತಿಯನ್ನು ನೀಡುತ್ತದೆ. ತೊಂದರೆಗಳ ಗುರುತಿಸುವಿಕೆ, ತಡೆಗಟ್ಟುವಿಕೆ, ನಿರ್ವಹಣೆ, ಇಂತಹ ಮಕ್ಕಳ ತರಬೇತಿ, ಸರ್ಕಾರದಿಂದ ಇಂತಹ ಮಕ್ಕಳಿಗೆ ನೀಡಲಾಗಿರುವ ವಿಶೇಷ ಸೌಲಭ್ಯ-ಸವಲತ್ತು-ಹಕ್ಕುಗಳ ಬಗ್ಗೆ ಮಾಹಿತಿ, ಸರ್ಕಾರದ ಕಾರ್ಯಕ್ರಮಗಳು-ಕಾನೂನುಗಳ ಬಗ್ಗೆ ತಿಳುವಳಿಕೆ, ಇತ್ಯಾದಿ. ಅತಿ ಮುಖ್ಯವಾಗಿ, ಮಾತು-ಕೇಳುವಿಕೆಗೆ ಸಂಬಂಧಪಟ್ಟ ನ್ಯೂನತೆಗಳುಳ್ಳ ಮಕ್ಕಳಿಗೆ ಮನೆಯಲ್ಲೇ ನಡೆಸಬಹುದಾದ ತರಬೇತಿ. ಇದಕ್ಕಾಗಿ ನಾಲ್ಕು ಭಾಗಗಳ ಒಂದು ತರಬೇತಿ ಕಾರ್ಯಕ್ರಮವನ್ನು ಸಂಸ್ಥೆಯು ರೂಪಿಸಿದೆ. ಭಾಗ 1, 3, ಮತ್ತು 4 ಎಲ್ಲರಿಗೂ ಕಡ್ಡಾಯ. ಭಾಗ 2 ರಲ್ಲಿ ನಾಲ್ಕು ವಿಷಯಗಳಿದ್ದು, ಪ್ರತಿಯೊಬ್ಬರೂ ಕಡ್ಡಾಯವಾಗಿ ಎರಡು ವಿಷಯಗಳನ್ನು ಅಭ್ಯಸಿಸಬೇಕು. ಈ ತರಬೇತಿಯ ವಿಶೇಷವೆಂದರೆ ಪೋಷಕರಿಗೆ ತಮ್ಮ ಮಕ್ಕಳಲ್ಲಿರುವ ತೊಂದರೆಯ ಬಗ್ಗೆ ಮಾತ್ರ ಅಲ್ಲ, ಉಳಿದ ತೊಂದರೆಗಳ ಬಗ್ಗೆಯೂ ಅಭ್ಯಾಸ ಮಾಡಲು ಭಾಗ 2 ರಲ್ಲಿ ಅವಕಾಶ-ಪ್ರೋತ್ಸಾಹ ನೀಡಲಾಗುವುದು.



ಪ್ರಸ್ತುತ ಅಂಚೆ ತೆರಪಿನ ಶಿಕ್ಷಣದ ಮೂಲಕ ಕನ್ನಡದಲ್ಲಿ ತರಬೇತಿಯನ್ನು ಆರಂಭಿಸುತ್ತಿದ್ದೇವೆ. ಮುಂದೆ ಇಂಗ್ಲೀಷ್, ಹಿಂದಿ, ಮಲಯಾಳಂ ಮತ್ತು ನಮ್ಮ ದೇಶದ ಇತರ ಮುಖ್ಯ ಭಾಷೆಗಳಲ್ಲೂ ಸಹ ತರಬೇತಿಯನ್ನು ಪ್ರಾರಂಭಿಸುತ್ತೇವೆ. ಈ ತರಬೇತಿ ಎಸ್. ಎಸ್.ಎಲ್.ಸಿ (10 ನೇ ತರಗತಿ)ಯಲ್ಲಿ ಉತ್ತೀರ್ಣರಾಗಿರುವ ಎಲ್ಲಾ ಪೋಷಕವರ್ಗದವರಿಗೂ ಲಭ್ಯವಿದೆ.

ಈ ಸರ್ಟಿಫಿಕೇಟ್ ಪಠ್ಯ ಕ್ರಮ ಮಾತು–ಭಾಷೆ–ಕೇಳುವಿಕೆಯ ತೊಂದರೆಗಳುಳ್ಳ ಮಕ್ಕಳ ತಂದೆ ತಾಯಿಯರಿಗೆ ವಿಶೇಷವಾಗಿ ರೂಪಿಸಲ್ಪಟ್ಟಿದ್ದರೂ ಕೂಡ, ಹೆಚ್ಚಿನ ಸಂಖ್ಯೆಯಲ್ಲಿ ತಾಯಂದಿರು, ನಮ್ಮ ಸೋದರಿಯರು ಇದರ ಪ್ರಯೋಜನ ಪಡೆಯಲಿ ಎಂದು ನಮ್ಮ ಆಸೆ. ಏಕೆಂದರೆ ಒಂದು ಮಗುವಿನ ಶಿಕ್ಷಣದಲ್ಲಿ, ಪಾಲನೆ–ಪೋಷಣೆಯಲ್ಲಿ, ಬೇಕು–ಬೇಡಗಳನ್ನು ಗುರುತಿಸುವಲ್ಲಿ, ತಾಯಿಯರಿಗೆ ಸರಿಸಮನಾಗಿ ಯಾರೂ ನಿಲ್ಲಲಾರರು. ಒಂದು ಸಂಸಾರದಲ್ಲಿ ಓದು ಬರಹ ಬಲ್ಲ ಒಬ್ಬಳು ಹೆಣ್ಣಿದ್ದರೆ, ಇಡೀ ಸಂಸಾರವೇ ಮುಂದೆ ಬರುತ್ತದೆ ಎಂದು ನಾಣ್ಣುಡಿಯೇ ಇದೆಯಲ್ಲ! ಈ ರೀತಿ ತರಬೇತಿ ಪಡೆದ ಒಬ್ಬ ತಾಯಿ, ತನ್ನ ಮಕ್ಕಳಿಗಷ್ಟೇ ಅಲ್ಲ, ತನ್ನ ಸುತ್ತಮುತ್ತಲಿರುವ ಎಲ್ಲಾ ಮಕ್ಕಳಿಗೂ ದಾರಿದೀಪವಾಗಬಲ್ಲಳು.

ಈ ಭಾಗ ಮಾತು–ಭಾಷೆಯ ನ್ಯೂನತೆಗಳನ್ನು ಕುರಿತದ್ದು. ಮಾತು–ಭಾಷೆಯ ನ್ಯೂನತೆಗಳನ್ನು ಆರಂಭದಲ್ಲೇ ಗುರುತಿಸಲು, ಹಾಗೂ ಅವುಗಳಿಗೆ ತಕ್ಕ ಪರಿಹಾರಮಾರ್ಗಗಳ ಬಗ್ಗೆ ಸಲಹೆ–ಸೂಚನೆ ನೀಡಲು ಈ ಪುಸ್ತಕ ರಚಿಸಲ್ಪಟ್ಟಿದೆ. ಇದರಲ್ಲಿ ಮಾತು–ಭಾಷೆಯ ನ್ಯೂನತೆಗಳು ಇರುವ ಮಕ್ಕಳಿಗೆ ನೀಡಬಹುದಾದ ತರಬೇತಿ ವಿಧಾನಗಳ ಬಗ್ಗೆ ತಿಳಿಸಲಾಗಿದೆ. ಈ ತೊಂದರೆಗಳಿಗೆ ತುತ್ತಾಗುವ ಮಕ್ಕಳು ಸಾಮಾಜಿಕವಾಗಿ, ಮಾನಸಿಕವಾಗಿ ಹಾಗೂ ವ್ಯಕ್ತಿಗತವಾಗಿ ಆತ್ಮವಿಶ್ವಾಸವನ್ನು ಬೆಳೆಸಿಕೊಂಡು ಯಶಸ್ವೀ ಜೀವನ ಸಾಗಿಸುವಂತಾಗಬೇಕೆಂಬುದು ನಮ್ಮ ಆಶಯ. ಈ ದಿಸೆಯಲ್ಲಿ ನಮ್ಮ ಈ ಪುಸ್ತಕವು ಪೋಷಕರಿಗೆ, ಉಪಾಧ್ಯಾಯರಿಗೆ ಉತ್ತಮ ಮಾರ್ಗಸೂಚಿ ಆಗುತ್ತದೆ ಎನ್ನುವುದು ನಮ್ಮ ನಂಬಿಕೆ.

ಈ ಪಠ್ಯಕ್ರಮವನ್ನು ರೂಪಿಸುವಲ್ಲಿ, ಬರೆಯುವಲ್ಲಿ ನಾವೆಷ್ಟು ಸಫಲರಾಗಿದ್ದೇವೆ ಎನ್ನುವುದರ ಬಗ್ಗೆ ನಿಮ್ಮ ಅನಿಸಿಕೆ ನಮಗೆ ಬಹಳ ಅವಶ್ಯ. ದಯವಿಟ್ಟು ಈ ಪಠ್ಯದ ನಿರೂಪಣೆ, ತಾಂತ್ರಿಕತೆ, ಸರಳತೆ, ಸಂಕೀರ್ಣತೆ ಮತ್ತು ನ್ಯೂನತೆಗಳ ಬಗ್ಗೆ ಬರೆದು ತಿಳಿಸಿ. ನಿಮ್ಮ ಅವಶ್ಯಕತೆಗಳನ್ನು ಪೂರೈಸಲು, ನಿಮ್ಮ ಅನಿಸಿಕೆಗಳನ್ನು ಗೌರವಿಸಲು, ನಿಮ್ಮ ಆಶಯಗಳನ್ನು ಮುಟ್ಟಲು ಮುಂದಿನ ಪ್ರಕಟಣೆಗಳಲ್ಲಿ ಸಾಧ್ಯವಾದಷ್ಟು ಪ್ರಯತ್ನಿಸುತ್ತೇವೆ. ನಮ್ಮ ಸಂಸ್ಥೆಯ ಆಸೆ–ಆಕಾಂಕ್ಷೆಗಳನ್ನು ಸಾಕಾರಗೊಳಿಸಲು ನಿಮ್ಮ ಸಹಕಾರ ಅತ್ಯಗತ್ಯ.

ಈ ತರಬೇತಿಯ ಪಠ್ಯ ವಿಷಯಗಳನ್ನು ರೂಪಿಸುವಲ್ಲಿ ವಿಷಯ ತಜ್ಞರು, ವಿಶೇಷ ತಜ್ಞರು ಹಾಗೂ ಸಂಪಾದಕ ಮಂಡಲಿಯ ಸದಸ್ಯರು ಹಗಲಿರುಳು ಶ್ರಮಿಸಿದ್ದಾರೆ. ಯೋಗ್ಯವಾದ ಪಠ್ಯವನ್ನು ರೂಪಿಸಲು ಇವರೆಲ್ಲರೂ ಯಶಸ್ವಿಯಾಗಿದ್ದಾರೆ ಎಂದು ನನ್ನ ಭಾವನೆ. ಇದಕ್ಕಾಗಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನನ್ನ ಹಾಗೂ ನಮ್ಮ ಸಂಸ್ಥೆಯ ವಿಶೇಷ ಅಭಿನಂದನೆಗಳು.

ಡಾ. ಮ. ಜಯರಾಮ್
ನಿರ್ದೇಶಕರು

# ಪರಿವಿಡಿ

**ಅಧ್ಯಾಯ 1** ಮಾತು ಮತ್ತು ಭಾಷೆಯ ಸ್ಪಷ್ಟ ವಿವರಣೆ

**ಅಧ್ಯಾಯ 2** ಮಾತು–ಭಾಷೆಗೆ ಅಗತ್ಯವಾಗಿರುವ ಅಂಶಗಳು

**ಅಧ್ಯಾಯ 3** ಮಾತು–ಭಾಷೆಯ ದೋಷ: ಸ್ಥಿತಿಗಳು ಮತ್ತು ಕಾರಣಗಳು

**ಅಧ್ಯಾಯ 4** ಮಾತು–ಭಾಷೆಯ ದೋಷ: ಗುಣಲಕ್ಷಣಗಳು

**ಅಧ್ಯಾಯ 5** ಮಾತು–ಭಾಷೆಯ ದೋಷಗಳನ್ನು ಗುರುತಿಸುವ ಬಗೆ

**ಅಧ್ಯಾಯ 6** ಮಾತು–ಭಾಷೆಯ ದೋಷಗಳ ತಡೆಗಟ್ಟುವಿಕೆ/ತರಬೇತಿ

**ಅಧ್ಯಾಯ 7** ಮನೆಯಂಗಳದ ಚಟುವಟಿಕೆಗಳು

**ಸ್ವ–ಅಧ್ಯಯನ**

**ಅನುಬಂಧ – ೧**

# ಅಧ್ಯಾಯ–1

# ಮಾತು ಮತ್ತು ಭಾಷೆಯ ಸ್ಪಷ್ಟ ವಿವರಣೆ

**ಪರಿಚಯ**

ಭೂಮಿಯ ಮೇಲಿನ ಎಲ್ಲ ಪ್ರಾಣಿಗಳಿಗಿಂತ ಮನುಷ್ಯ ಬುದ್ಧಿವಂತ ಎಂದು ಪರಿಗಣಿಸಲ್ಪಟ್ಟಿದ್ದಾನೆ. ಈತ ಚಿಂತಿಸುತ್ತಾನೆ, ಸರಿ–ತಪ್ಪುಗಳನ್ನು ನಿರ್ಧರಿಸುತ್ತಾನೆ. ಒಳ್ಳೆಯದು ಕೆಟ್ಟದ್ದು ಯಾವುದೆಂದು ತಿಳಿಯುವ ಶಕ್ತಿ ಈತನಿಗಿದೆ. ಇಂದು ಮತ್ತು ಮುಂದೆ ಹೇಗೆ ಜೀವನ ನಡೆಸಬೇಕು ಎಂದು ನಿರ್ಧರಿಸಿ ಅದರಂತೆ ನಡೆಯಬಲ್ಲ. ಹಿಂದಾಗಿರುವುದನ್ನು ನೆನಪಿಸಿಕೊಳ್ಳಬಲ್ಲ. ಹಿಂದಾಗಿರುವ ತಪ್ಪುಗಳನ್ನು ತಿದ್ದಿಕೊಳ್ಳಬಲ್ಲ. ಇದೆಲ್ಲ ಸಾಧ್ಯವಾಗಿರುವುದು ಆತನಿಗಿರುವ ಬುದ್ಧಿಶಕ್ತಿಯಿಂದ.

ಈ ಮನುಷ್ಯ ಪ್ರಕೃತಿಯ ಸೃಷ್ಟಿ. ಆತನ ದೇಹರಚನೆಯು ವಿಶಿಷ್ಟವಾದದ್ದು. ಆತನ ಬುದ್ಧಿ ಶಕ್ತಿಯು ಪ್ರಬಲವಾದದ್ದು. ಇದರಿಂದ ಆತ ತನ್ನ ಜೀವನ ಕ್ರಮವನ್ನು ವ್ಯವಸ್ಥಿತವಾಗಿ ರೂಪಿಸಿಕೊಳ್ಳಲು ಸಾಧ್ಯವಾಗಿದೆ. ಈತನಿಗೆ ಮಾತುಗಾರಿಕೆ ಎಂಬ ತಂತ್ರಜ್ಞಾನ ಲಭಿಸಿದೆ. ಮಾತಿನ ಮೂಲಕ ಈತ ಇತರರೊಂದಿಗೆ ಸಂಭಾಷಿಸಬಲ್ಲ. ಈ ಮಾತಿನ ಜೊತೆಗೆ ಭಾಷೆಯನ್ನು ರೂಢಿಸಿಕೊಂಡ ಮನುಷ್ಯ ಇನ್ನೂ ಎತ್ತರಕ್ಕೆ ಬೆಳೆಯಲು ಸಾಧ್ಯವಾಯಿತು ಎಂಬುದು ಎಲ್ಲರಿಗೂ ತಿಳಿದಿರುವ ವಿಚಾರವೇ ಆಗಿದೆ. ಹೀಗೆ ಮಾತು ಮತ್ತು ಭಾಷೆ ಎಂಬ ಆಯುಧಗಳಿಂದ ಇಂದು ಮನುಷ್ಯ ಅಚ್ಚರಿ ಹುಟ್ಟಿಸುವ ಬೆಳವಣಿಗೆಯನ್ನು ಕಂಡುಕೊಂಡಿದ್ದಾನೆ. ತನಗೆ ಅನ್ನಿಸಿದ್ದನ್ನು ಇತರರಿಗೆ ತಿಳಿಸುವ ಈ ಪ್ರಕ್ರಿಯೆಗೆ ಸಂವಹನ ಎಂದು ಕರೆಯುತ್ತಾರೆ. ಇದಕ್ಕಾಗಿ ಮನುಷ್ಯ ಮೊದಲು ಶಬ್ದ ಮತ್ತು ಸನ್ನೆಗಳ ಮೂಲಕ ಪ್ರಯತ್ನಿಸಿದನೆಂದು ತಿಳಿದುಬರುತ್ತದೆ. ಈ ಮಾತು ಮತ್ತು ಭಾಷೆ ಮಾನವನ ಹುಟ್ಟಿನೊಂದಿಗೆ ತಳಕು ಹಾಕಿಕೊಂಡು ಬಂದಿದೆ ಎಂದೇ ಹೇಳಬಹುದು. ಕ್ರಮೇಣ ಮಾನವನು ಮಾತಿನ ಮೂಲಕ ಭಾವನೆಯನ್ನು ಹಂಚಿಕೊಳ್ಳುವ ಪರಿಪಾಠ ಬೆಳೆಸಿಕೊಂಡನು. ಇದಕ್ಕಾಗಿ ಅವನು ಶಬ್ದಗಳ ಜೋಡಣೆ ಮಾಡುವುದನ್ನು ಕಲಿತನು. ಅರ್ಥಬದ್ಧವಾದ ಪದಗಳ ಸರಣಿಯನ್ನು ಉಪಯೋಗಿಸಿ, ಸಂದರ್ಭಕ್ಕೆ ಅನುಗುಣವಾಗಿ ವಾಕ್ಯ ರಚನೆ ಮಾಡಿ, ಸಂವಹನ ಕ್ರಿಯೆಯನ್ನು ರೂಢಿಸಿಕೊಂಡನು.

ಮಾನವನ ವಿವಿಧ ಅಂಗಗಳು, ಪ್ರಮುಖವಾಗಿ ಬಾಯಿ ಮತ್ತು ಕಿವಿ ಸಂವಹನ ಕ್ರಿಯೆಗೆ ಸಹಾಯ ಮಾಡುತ್ತವೆ. ಈ ಅಂಗಗಳು ಕೆಲವೊಮ್ಮೆ ದೋಷಪೂರಿತವಾಗಿರುವ ಸಾಧ್ಯತೆ ಇದೆ. ಬಾಯಿ ಮತ್ತು ಕಿವಿಯಲ್ಲಿನ ದೋಷಗಳು ವಾಸಿಮಾಡಲಾಗದ ಅಥವಾ ತಿದ್ದಿಕೊಳ್ಳಲಾಗದ ತೊಂದರೆಗಳೇನಲ್ಲ. ಇವುಗಳನ್ನು ಸರಿಪಡಿಸಿಕೊಳ್ಳಲು ನಾವು ಚಿಕಿತ್ಸೆಯ ಜೊತೆಗೆ ಗಟ್ಟಿ ಮನಸ್ಸು ಮಾಡಬೇಕಷ್ಟೆ.

ಪ್ರಕೃತಿದತ್ತವಾಗಿ ಜನಿಸುವ ಮನುಷ್ಯನ ಹುಟ್ಟಿನಲ್ಲಿ ಹಲವು ಕಾರಣಗಳಿಂದಾಗಿ ದೋಷಗಳು ತಲೆದೋರುವ ಸಾಧ್ಯತೆಗಳಿವೆ. ಹುಟ್ಟಿದ ಮಗುವಿನಲ್ಲಿ ಸಂವಹನ ಕ್ರಿಯೆಗೆ ಸಹಾಯಮಾಡುವ ಅಂಗಗಳಾದ ಬಾಯಿ ಮತ್ತು ಕಿವಿಯ ಅಂಗರಚನೆಯಲ್ಲಿ ದೋಷವಿದ್ದಲ್ಲಿ ಮಗು ಬೆಳೆದಂತೆ ಆ ದೋಷಗಳು ಕ್ರಮೇಣ ಗೋಚರವಾಗುತ್ತವೆ. ಇಂತಹ ದೋಷಗಳನ್ನು ನಾವು ಪ್ರಾರಂಭದಲ್ಲೇ ಗುರುತಿಸಿ ಸರಿಪಡಿಸಲು ಸಾಧ್ಯವಿದೆ.

ಇಂತಹ ಸಾಧ್ಯತೆಗಳಲ್ಲಿ ತಾಯಿಯ ಪಾತ್ರ ಮಹತ್ವದ್ದು. 'ಮನೆಯೇ ಮೊದಲ ಪಾಠಶಾಲೆ, ತಾಯಿಯೇ ಮೊದಲ ಗುರು' ಎಂಬ ನಾಣ್ಣುಡಿಯಂತೆ, ಮಗುವಿನ ಸೂಕ್ಷ್ಮ ಚಲನವಲನಗಳನ್ನು ತಾಯಿ ಗಮನಿಸಿ ಮಗು ಆರೋಗ್ಯವಂತ ಹಾಗೂ ಪರಿಪೂರ್ಣ ವ್ಯಕ್ತಿಯಾಗಿ ಬೆಳೆಯಲು ಕಾರಣಳಾಗುತ್ತಾಳೆ.



ಮಕ್ಕಳ ತೊದಲುಮಾತು

**ಒಂದು ಮಗು:** "ನಾವು ತಂದೆ ನಮ್ಮನೆ ಕತ್ತೆಯ ಮೇಲೆ ಆತ ಆದೋಣ?"

(ನಾವು ಸಂಜೆ ನಮ್ಮನೆ ಕಟ್ಟೆಯ ಮೇಲೆ ಆಟ ಆಡೋಣ?)

**ಇನ್ನೊಂದು ಮಗು:** "ನಾನು ಬಲಲ್ಲ. ತಂದೆ ಅದ್ದಿ ಮನೆಗೆ ಹೋಗಿದ್ದೆ".

(ನಾನು ಬರಲ್ಲ. ಸಂಜೆ ಅಜ್ಜಿ ಮನೆಗೆ ಹೋಗಬೇಕು.)

ಈ ಮೇಲಿನ ಚಿತ್ರದಲ್ಲಿ ತೋರಿಸಿರುವ ಪುಟ್ಟ ಮಕ್ಕಳ ತೊದಲುಮಾತುಗಳು ಯಾರಿಗೆ ತಾನೆ ತಿಳಿದಿಲ್ಲ? ಮೊದಲಿನ ಮಗು ಮಾತಿನ ಉಚ್ಛಾರಣೆಯಲ್ಲಿ ಅಸ್ಪಷ್ಟತೆ ತೋರಿಸಿದರೆ (।ಟ। ಗೆ ।ತ।; ।ಡ। ಗೆ ।ದ।; ।ಸ। ಗೆ ।ತ।) ಎರಡನೆಯ ಮಗು ಅಸ್ಪಷ್ಟ ಉಚ್ಛಾರಣೆಯೊಂದಿಗೆ ಭಾಷಾರಚನೆಯ ವೈಕಲ್ಯತೆಯನ್ನು (ಭೂತ/ಭವಿಷ್ಯತ್ ಕಾಲದ ತಪ್ಪು ಉಪಯೋಗ) ತೋರಿಸುತ್ತಿದೆ. ಇಂತಹ ಹಲವಾರು ದೋಷಗಳನ್ನು ತೋರುವ ಮಕ್ಕಳನ್ನು ನಾವು ಆದಷ್ಟು ಬೇಗನೆ ಗುರುತಿಸಿ ತಜ್ಞರ ಸಹಾಯದಿಂದ ಮಾತನ್ನು ತಿದ್ದಲು ಪ್ರಾರಂಭಿಸಿದರೆ ಆ ಮಗು ಎಲ್ಲರಂತೆ ಮಾತು ಕಲಿಯುವ ಸಾಧ್ಯತೆಗಳು ಹೆಚ್ಚು.

## 1) ಸಂವಹನ–ಭಾಷೆ–ಮಾತು : ವ್ಯತ್ಯಾಸವೇನು ?

### (i) ಸಂವಹನ ಎಂದರೇನು?

ಮನಸ್ಸಿನಲ್ಲಿರುವ ಭಾವನೆ, ವಿಚಾರಗಳು, ಅನಿಸಿಕೆಗಳನ್ನು ಇತರರಿಗೆ ತಲುಪಿಸುವ ವಿಧಾನವನ್ನು 'ಸಂವಹನ' ಎಂದು ಕರೆಯುತ್ತಾರೆ. ಸಂವಹನ ಕ್ರಿಯೆಗೆ ಬಹು ಮುಖ್ಯವಾಗಿ ಬೇಕಾಗುವುದು ಭಾಷಾ ಸಂಕೇತಗಳು ಹಾಗೂ ಗ್ರಹಣಶಕ್ತಿ. ಭಾಷೆಯ ಸಂಕೇತಗಳನ್ನು ವಿವಿಧ ರೀತಿಯಲ್ಲಿ ಅಳವಡಿಸಿಕೊಳ್ಳಬಹುದು. ಮಾತಿನ ಸ್ವರಗಳ ತರ್ಕಬದ್ಧ ಜೋಡಣೆ, ಬರವಣಿಗೆಯ ಅಕ್ಷರಮಾಲೆ, ಚಿತ್ರಗಳ ಅಥವಾ ಕೈಸನ್ನೆಗಳ ಮಾಧ್ಯಮಗಳು ಮಾನವನು ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳಲು ಸಹಕಾರಿಯಾಗುತ್ತವೆ.



ವಿಚಾರ ವಿನಿಮಯ

### (ii) ಭಾಷೆ ಎಂದರೇನು ?

'ಸಂವಹನ'ಕ್ಕಾಗಿ ಮಾನವನು ಬಳಸುವ ಅರ್ಥಬದ್ಧ ಸಂಕೇತಗಳ ಸರಣಿಗೆ 'ಭಾಷೆ' ಎಂದು ಹೇಳುತ್ತೇವೆ.

**(iii) ಭಾಷೆಯನ್ನು ವ್ಯಕ್ತಪಡಿಸುವ ಮಾಧ್ಯಮಗಳು ಯಾವುವು ?**



ಭಾಷಾ ಸಂಕೇತಗಳು ಈ ಕೆಳಕಂಡ ಯಾವುದೇ ಮಾಧ್ಯಮದಲ್ಲಿ ವ್ಯಕ್ತಗೊಳ್ಳುವ ಸಾಧ್ಯತೆ ಇದೆ:

(a) ಮಾತಿನ ಪದಗಳ ಜೋಡಣೆ: । ನೀವು ರಾಮವ್ವ ಅಲ್ವೆ? । X

। ನೀವು ರಾಮಣ್ಣ ಅಲ್ವೆ? । ✓

(b) ಅಕ್ಷರ ಮಾಲೆಯ ತರ್ಕಬದ್ಧ ಜೋಡಣೆ: । ಗರಗಸ । ✓

। ಗಸರಗ । X



(c) ಚಿತ್ರಿಸುವ ಮೂಲಕ/ ಕೈ ಸಂಕೇತದ ಮೂಲಕ

(d) ಮುಖ ಭಾವನೆಯ ಮೂಲಕ (Gesture)




**(iv) ಮಾತು ಎಂದರೇನು ?**

ಬಾಯಿಯ ಅವಯವಗಳ ಸಹಾಯದಿಂದ ಭಾಷಾ ಸಂಕೇತಗಳನ್ನು ಅರ್ಥಬದ್ಧವಾಗಿ ಸ್ವರ ಜೋಡಣೆ ಮಾಡಿದಾಗ ಉಂಟಾಗುವುದೇ 'ಮಾತು'. ಸ್ವರ ಜೋಡಣೆ ಸ್ಪಷ್ಟವಿದ್ದು ಅರ್ಥಸಂಬಂಧವಿಲ್ಲದ ಸರಣಿಯನ್ನು 'ಮಾತು' ಎಂದು ಹೇಳಲಾಗುವುದಿಲ್ಲ.

ಉದಾ : । ಉಂಗುರ । ✓

। ಉರುಂಗ । X



ಸಂವಹನ, ಭಾಷೆ ಮತ್ತು ಮಾತಿನ ಪರಸ್ಪರ ಹೊಂದಾಣಿಕೆಯನ್ನು ಈ ಕೆಳಗಿನ ಚಿತ್ರ ಸ್ಪಷ್ಟಪಡಿಸುತ್ತದೆ.



### 2) ಸಂವಹನ ಕ್ರಿಯೆಗೆ ಸಹಾಯ ಮಾಡುವ ಅಂಗಗಳಾವುವು?

ಮಾತನಾಡಲು ಆಡಿದ ಮತ್ತು ಮಾತನ್ನು ಕೇಳಿಸಿಕೊಳ್ಳಲು ಬಹು ಮುಖ್ಯವಾಗಿ ಸಹಾಯ ಮಾಡುವ ಅಂಗಗಳೆಂದರೆ 'ಬಾಯಿ' ಮತ್ತು 'ಕಿವಿ'. ಬಾಯಿ ಇದ್ದೂ ಮಾತನಾಡಲಾಗದೆ, ಕಿವಿ ಇದ್ದೂ ಕೇಳಿಸಿಕೊಳ್ಳಲಾಗದೆ ಅಥವಾ ಬಾಯಿ–ಕಿವಿ ಎರಡೂ ಸರಿಯಾಗಿ ಕೆಲಸ ಮಾಡದಿದ್ದರೆ ಸಂವಹನ ಕ್ರಿಯೆಗೆ ತಡೆಯುಂಟಾಗುವುದು ಸಹಜ. ಹಲವಾರು ಬಾರಿ, ಮೇಲೆ ಹೇಳಿದ ಅಂಶಗಳೆಲ್ಲಾ ಸರಿಯಾಗಿದ್ದು ಮನುಷ್ಯನ ಮಿದುಳಿನ ರಚನೆ ಅಥವಾ ಶಕ್ತಿ ಕುಂಠಿತವಾಗಿದ್ದಲ್ಲಿಯೂ ಸಹ ಸಂವಹನ ನಿಷ್ಕ್ರಿಯಗೊಳ್ಳುವ ಸಾಧ್ಯತೆಯಿದೆ.

### 3) ಭಾಷೆ ಮತ್ತು ಮಾತು ಒಂದು ಸಮಾಜದ ರೀತಿನೀತಿಗಳಿಗೆ ಒಳಪಟ್ಟಿರುತ್ತದೆಯೆ?

ಒಂದು ಗುಂಪಿನ/ಸಮಾಜದ ಭಾಷಾ ನಿಯಮಾವಳಿಗಳಿಗೆ ಒಳಪಟ್ಟು ಮಾತಿನ ಸ್ವರಗಳ ಅರ್ಥಬದ್ಧ ಸರಣಿಯನ್ನು ಜೋಡಿಸಲಾಗುತ್ತದೆ. ಹಾಗಾಗಿ 'ಮಾತು' ಮತ್ತು 'ಭಾಷೆ' ಎನ್ನುವುದು ಒಂದು ನಿರ್ದಿಷ್ಟ ಸಮಾಜದ ರೀತಿ–ನೀತಿಗಳಿಗೆ ಬದ್ಧವಾಗಿ ಅದರ ನಿಯಮಾವಳಿಗಳನ್ನು ಪಾಲಿಸುತ್ತದೆ.

### 4) 'ಮಾತು ಮತ್ತು ಭಾಷೆ' ಮಾನವನ ವಿಶಿಷ್ಟತೆ ಹೇಗೆ?

ಮಾನವನ ಬೆಳವಣಿಗೆಯ ಹಂತಗಳಲ್ಲಿ ಅತಿ ಮುಖ್ಯವಾದ ಅಂಶವೆಂದರೆ ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳಲು ರೂಢಿಸಿಕೊಂಡಿರುವ 'ಸಂವಹನ' ಕ್ರಿಯೆ (communication). ಈ ಸಂವಹನ ಕ್ರಿಯೆಯು 'ಮಾತು' ಮತ್ತು 'ಭಾಷೆ'ಯ ಹುಟ್ಟಿಗೆ ಕಾರಣವಾಯಿತು. ಸಂವಹನ ಕ್ರಿಯೆಗೆ ಅನುಕೂಲವಾಗುವಂತೆ ಮಾನವನು ಭಾಷೆಯ ಸಂಕೇತಗಳನ್ನು ಹೆಚ್ಚಾಗಿ ಮಾತಿನ ಮೂಲಕ ಅಳವಡಿಸಿಕೊಂಡಿದ್ದಾನೆ. ಪುರಾತನ ಕಾಲದಿಂದಲೂ ಭಾಷೆ ಇದೆ. ಆದರೆ ಬರವಣಿಗೆ ಮಾತ್ರ ಕಾಲಾನುಕಾಲಕ್ಕೆ ಬೆಳೆದು ಬಂದಿತು. ಹಾಗಾಗಿ, ಮಾನವನು ಮಾತಿನ ಮೂಲಕ ಭಾವನೆಯನ್ನು ಹಂಚಿಕೊಳ್ಳುವ ಪರಿಪಾಠ ಬೆಳೆಸಿಕೊಂಡನು.

## ಅಭ್ಯಾಸ–1

1) ಭಾಷೆಯನ್ನು ವ್ಯಕ್ತಪಡಿಸಲು ಉಪಯೋಗಿಸುವ ಒಂದು ಮಾಧ್ಯಮವನ್ನು ಹೆಸರಿಸಿ.

2) ಮಾತು ಭಾಷೆಯ ನಿಯಮಾವಳಿಗಳಿಗೆ ಬದ್ಧವಾಗಿಲ್ಲ. ಸರಿ ತಪ್ಪು

3) ಮಾತಿನ ಮೂಲಕ ನಡೆಯುವ ಸಂವಹನಕ್ಕೆ ಅತಿ ಮುಖ್ಯವಾಗಿ ಬೇಕಾಗಿರುವ ಅಂಗಗಳು ______ ______ ______

4) ಭಾಷಾ ಸಂಕೇತಗಳು ಎಲ್ಲಾ ರೀತಿಯ ಸಮಾಜದಲ್ಲೂ ಒಂದೇ ರೀತಿಯದ್ದಾಗಿರುತ್ತದೆ. ಸರಿ ತಪ್ಪು

5) ಶೈಶವಾವಸ್ಥೆಯಲ್ಲಿ (1–3 ವಯಸ್ಸಿನ ಮಕ್ಕಳು) ತಪ್ಪಾಗಿ ಉಚ್ಚರಿಸುವುದನ್ನು ಮಾತಿನ ದೋಷವೆಂದು ಪರಿಗಣಿಸುತ್ತೇವೆ ಸರಿ ತಪ್ಪು

# ಅಧ್ಯಾಯ-2

# ಮಾತು-ಭಾಷೆಗೆ ಅಗತ್ಯವಾಗಿರುವ ಅಂಶಗಳು

## 1) ಭಾಷೆಯ ಬೆಳವಣಿಗೆ ಮಗುವಿನ ಜನನಕಾಲದಿಂದಲೂ ಉಂಟಾಗುತ್ತದೆಯೆ?




ಒಂದು ನವಜಾತ ಶಿಶುವಿನ ಸರ್ವಾಂಗೀಣ ಬೆಳವಣಿಗೆಯಲ್ಲಿ ಭಾಷಾ ಬೆಳವಣಿಗೆಯೂ ಒಂದು ಮುಖ್ಯವಾದ ಹಂತ. ಭಾಷೆಯು ಸಾಮಾನ್ಯವಾಗಿ ಒಂದು ನಿರ್ದಿಷ್ಟ ಸಮಾಜ/ಗುಂಪಿಗೆ ಬದ್ಧವಾಗಿ, ಆಯಾ ಸಮಾಜದ ರೀತಿ-ನೀತಿಗಳನ್ನು ಒಳಗೊಂಡು ರಚಿಸಲ್ಪಟ್ಟಿರುತ್ತದೆ. ಆದುದರಿಂದ ಒಂದು ಸಂಕೇತದ ಅರ್ಥ ಎರಡು ಬೇರೆ ಬೇರೆ ಸಮಾಜಗಳಲ್ಲಿ ಒಂದೇ ರೀತಿಯದ್ದಾಗಿರುತ್ತದೆಂಬ ನಿಯಮವಿಲ್ಲ.

## 2) ಶಿಶುವಿನ ಭಾಷೆಯ ಬೆಳವಣಿಗೆಗೆ ಪೂರಕವಾಗಿರುವ ಅಂಶಗಳು ಯಾವುವು?



ಶಿಶುವಿನ ಭಾಷೆಯ ಬೆಳವಣಿಗೆಗೆ ಪೂರಕವಾಗಿರುವ ಅಂಶಗಳು

* ಒಂದೇ ರೀತಿಯ ನಿಯಮಾವಳಿಗಳನ್ನು ಹೊಂದಿರುವ ಒಂದು ಸಮಾಜ
* ಭಾವನೆ/ವಿಚಾರಗಳನ್ನು ವ್ಯಕ್ತಪಡಿಸುವ ಉತ್ಸಾಹ/ಆಸಕ್ತಿ ಇರುವುದು
* ಮಾನವ ಸಂಬಂಧ ರೂಢಿಸಿಕೊಳ್ಳುವ ಇಚ್ಛೆ

* ಹೆಚ್ಚು ಮೂಲಗಳಿಂದ ವಿಚಾರ ತಿಳಿಯುವ ಕುತೂಹಲ ಹೊಂದಿರುವುದು
* ಭಾಷಾ ಸಂಕೇತಗಳನ್ನು ತಿಳಿಸುವ/ತಿಳಿಯಲ್ಪಡುವ ಜ್ಞಾನೇಂದ್ರಿಯಗಳ ಸಹಕಾರ (ಕಿವಿ, ಕಣ್ಣು, ಸ್ಪರ್ಶ)

ಮೇಲೆ ಹೇಳಿರುವ ಎಲ್ಲಾ ಅಂಶಗಳೊಂದಿಗೆ ಶಿಶುವಿನ ಸಂಜ್ಞಾನಾತ್ಮಕ ಶಕ್ತಿ (Cognitive skill) ಭಾಷಾ ಬೆಳವಣಿಗೆಯಲ್ಲಿ ಅತಿ ಮುಖ್ಯವಾದ ಪಾತ್ರ ವಹಿಸುತ್ತದೆ. ಮಕ್ಕಳ ಆಟೋಟ ಚಟುವಟಿಕೆಗಳು ಸಂಜ್ಞಾನಾತ್ಮಕ ಶಕ್ತಿಯನ್ನು ಹೆಚ್ಚಿಸುವುದಲ್ಲದೆ ಭಾಷಾ ಬೆಳವಣಿಗೆಗೆ ಅತಿ ಮುಖ್ಯವಾಗಿರುವ ಸಾಮಾಜಿಕ ಸಾಹಚರ್ಯೆಗಳನ್ನೂ ಬೆಳೆಸಿಕೊಳ್ಳಲು ಪೂರಕವಾಗಿರುತ್ತದೆ.




ನಾವು ಮಾತನಾಡಲು ಬಳಸುವ ಮುಖ್ಯ ಅಂಗಗಳು

### 3) ಮನುಷ್ಯನ ದೇಹರಚನೆಯಲ್ಲಿ ಮಾತನಾಡಲು ಸಹಾಯಮಾಡುವ ಮುಖ್ಯ ಅಂಗಗಳಾವುವು?

ಮಾತನಾಡಲು ಭಾಷೆಯ ಅವಶ್ಯಕತೆ ಮುಖ್ಯ. ಇದರೊಂದಿಗೆ ಮಾತಿನ ಕ್ರಿಯೆಗೆ ಸಹಾಯಮಾಡುವ ನರಮಂಡಲ, ಉಸಿರಾಟದ ಅಂಗಗಳಾದ ಶ್ವಾಸಕೋಶ, ಧ್ವನಿಪೆಟ್ಟಿಗೆ, ಬಾಯಿಯ ಅವಯವಗಳಾದ ತುಟಿ, ನಾಲಿಗೆ, ಹಲ್ಲು, ಬಾಯಿಯ ಅಂಗುಳು ಹಾಗೂ ಸ್ನಾಯುಗಳ ಒಟ್ಟು ಒಡನಾಟ ಬಲು ಮುಖ್ಯ.

### 4) ಮಾತು–ಭಾಷೆಯ(ಮಾತಿನ) ಬೆಳವಣಿಗೆಯ ವಿವಿಧ ಹಂತಗಳಾವುವು?

ಮಾತು ಒಂದು ಕ್ಲಿಷ್ಟವಾದ ಕ್ರಿಯೆ. ಮಾತನಾಡಲು ಈ ಮೊದಲೇ ಹೇಳಿದಂತೆ ವಿವಿಧ ಅಂಗಗಳ ಒಟ್ಟಾರೆ ಒಡನಾಟ ಬಲು ಮುಖ್ಯ. ಅಂತೆಯೇ ಮಾತು ಭಾಷಾ ಸಂಕೇತವನ್ನು ವ್ಯಕ್ತಪಡಿಸುವ ಒಂದು ಮಾಧ್ಯಮ. ಇಂತಹ ಕ್ಲಿಷ್ಟವಾದ ಕ್ರಿಯೆ ಹಂತ–ಹಂತವಾಗಿ ಶಿಶುವಿನ ಸಂಜ್ಞಾನಾತ್ಮಕ ಶಕ್ತಿ ಮಾನಸಿಕ ಶಕ್ತಿ, ಬೌದ್ಧಿಕ ಶಕ್ತಿ ಹಾಗೂ ದೈಹಿಕ ಶಕ್ತಿಯೊಂದಿಗೆ ಬೆಳೆಯುತ್ತದೆ. ಮಾತಿನ ಹಂತಗಳು ಕೆಳಗಿನ ಚಿತ್ರದಲ್ಲಿ ಸ್ಪಷ್ಟವಾಗುತ್ತದೆ.






ಮಗುವೊಂದು ಮಾತನ್ನು ಕಲಿಯುವ ವಿವಿಧ ಹಂತಗಳ ಚಿತ್ರಣ

## 5) ಮಾತು, ಭಾಷೆಯ ಬೆಳವಣಿಗೆಯಲ್ಲಿ ದೋಷಗಳು ಉಂಟಾಗುವ ಸಾಧ್ಯತೆ ಇದೆಯೇ?

ಭಾಷೆ ಮತ್ತು ಮಾತಿನ ಬೆಳವಣಿಗೆಗೆ ಬೇಕಾಗಿರುವ ಮುಖ್ಯ ಅಂಶಗಳು/ಅಂಗಗಳಲ್ಲಿ ಏರು ಪೇರಾದರೆ ಮಾತು ಮತ್ತು ಭಾಷಾ ಬೆಳವಣಿಗೆಯಲ್ಲಿ ದೋಷಗಳು/ವೈಕಲ್ಯತೆಗಳು ಉಂಟಾಗುವ ಸಾಧ್ಯತೆ ಇದೆ. ಇಂತಹ ದೋಷಗಳು/ವೈಕಲ್ಯತೆಗಳು ಭಾಷಾ ಬೆಳವಣಿಗೆಯಲ್ಲಷ್ಟೇ ಇರಬಹುದು; ಇಲ್ಲವೇ ಮಾತಿನ ಬೆಳವಣಿಗೆಯಲ್ಲಷ್ಟೇ ಇರಬಹುದು; ಅಥವಾ ಇವೆರಡರ ಸಮ್ಮಿಶ್ರಣವೂ ಆಗಿರಬಹುದು.

## 6) ಮಾತು ಮತ್ತು ಭಾಷೆಯ ದೋಷಗಳು ಯಾವುವು ?

ಮಾತು ಮತ್ತು ಭಾಷೆಯ ದೋಷಗಳನ್ನು ಈ ಕೆಳಗಿನಂತೆ ವಿಂಗಡಿಸಿ ನೋಡಬಹುದು.

### i) ಭಾಷೆಯ ದೋಷಗಳ ವಿಂಗಡಣೆ

ಒಂದು ಮಗು ಅಥವಾ ವ್ಯಕ್ತಿ ಭಾಷೆಯ ಸಂಕೇತಗಳನ್ನು ಸಂವಹನಕ್ಕಾಗಿ ಸೂಕ್ತರೀತಿಯಲ್ಲಿ ಉಪಯೋಗಿಸದಿದ್ದರೆ ಅಂತಹ ಮಗು ಮತ್ತು ವ್ಯಕ್ತಿಯನ್ನು ಭಾಷಾ ದೋಷವುಳ್ಳ ಮಗು ಅಥವಾ ವ್ಯಕ್ತಿಯೆಂದು ಗುರುತಿಸಲಾಗುತ್ತದೆ. ಭಾಷಾದೋಷವುಳ್ಳ ಮಗು/ವ್ಯಕ್ತಿಯ ಮಾತು ಸ್ಪಷ್ಟವಾಗಿರಲೂ ಸಾಧ್ಯ ಅಥವಾ ಮೊದಲೇ ಹೇಳಿದಂತೆ ಮಾತು ಮತ್ತು ಭಾಷಾದೋಷಗಳ ಸಮ್ಮಿಶ್ರ ಸ್ಥಿತಿ ಇದ್ದಲ್ಲಿ ಅಸ್ಪಷ್ಟವಾಗಿರಲೂ ಸಾಧ್ಯ. ಭಾಷೆಯ ದೋಷಗಳು ಎಳೆಯ ವಯಸ್ಸಿನ ಮಕ್ಕಳಲ್ಲಿ, ವಯಸ್ಕರಲ್ಲಿ ಮತ್ತು ವಯೋವೃದ್ಧರಲ್ಲಿಯೂ ಕಂಡುಬರುವ ಸಾಧ್ಯತೆ ಇದೆ. ಭಾಷಾದೋಷಗಳ ಕಾರಣಗಳು ಮತ್ತು ಗುಣಲಕ್ಷಣಗಳನ್ನು ಪರಿಗಣಿಸಿ ಈ ಕೆಳಕಂಡಂತೆ ವಿಂಗಡಿಸಲಾಗಿದೆ.

a) ನಿಧಾನಗತಿಯ ಭಾಷಾ ಬೆಳವಣಿಗೆ

b) ನಿರ್ದಿಷ್ಟ ಭಾಷಾ ದೋಷಗಳು

c) ಭಾಷಾ ಬೆಳವಣಿಗೆ ಹಿಂದುಳಿಯುವಿಕೆ (regression)

d) ಮಾತುಸ್ತಂಭ

e) ಕಲಿಕಾ ನ್ಯೂನತೆಗಳು

### ii) ಮಾತಿನ ದೋಷಗಳ ವಿಂಗಡಣೆ

ಮಾತಿನ ದೋಷಗಳು ಹಲವೊಮ್ಮೆ ಭಾಷೆಯ ದೋಷಗಳನ್ನು ಒಳಪಡದೇ ಪ್ರತ್ಯೇಕವಾಗಿ ಬರೀ ಮಾತಿನ ದೋಷಗಳಾಗಿ ಕಂಡು ಬರುತ್ತವೆ. ಮಗುವಿಗೆ/ವ್ಯಕ್ತಿಗೆ ಭಾಷಾ ಸಂಕೇತದ ಸೂಕ್ತ ಉಪಯೋಗದ ತಿಳುವಳಿಕೆಯಿದ್ದರೂ ಸಹ ಅಂತಹ ಸಂಕೇತಗಳು ಮಾತಿನ ಅವಯವಗಳ ಮೂಲಕ ಅಸ್ಪಷ್ಟವಾದಾಗ ಮಾತಿನ ದೋಷಗಳುಂಟಾಗುತ್ತವೆ. ಸಾಮಾನ್ಯವಾಗಿ ಮಾತಿನ ಉಚ್ಚಾರಣೆ, ನಿರರ್ಗಳತೆ ಮತ್ತು ಧ್ವನಿಯಲ್ಲಿ ವ್ಯತ್ಯಾಸ ಉಂಟಾದಾಗ ಮಾತಿನ ದೋಷಗಳೆಂದು ಕರೆಯಲ್ಪಡುತ್ತದೆ.

* ಉಚ್ಚಾರಣಾದೋಷ
* ತೊದಲು ಮಾತು
* ಧ್ವನಿ ತೊಂದರೆಗಳು

**7) ನಮ್ಮ ದೇಶದಲ್ಲಿ ಅಂಕಿ-ಅಂಶಗಳ ಪ್ರಕಾರ ಮಾತು-ಭಾಷಾ ದೋಷಗಳ ಪ್ರಮಾಣವೇನು?**

ಮಾತು ಮತ್ತು ಭಾಷಾ ದೋಷಗಳ ಪ್ರಮಾಣ ಇಂತಿಷ್ಟೇ ಎಂದು ನಿಖರವಾಗಿ ಹೇಳಲು ಲಭ್ಯವಿರುವ ಅಂಕಿ-ಅಂಶಗಳು ಸ್ಪಷ್ಟಪಡಿಸಿಲ್ಲ. ಆದರೂ ಕೆಲವು ನಿರ್ದಿಷ್ಟ ಸಂಶೋಧನೆ (ಮಾಹಿತಿ ಸಂಗ್ರಹಣೆ) ಮೂಲಕ (NSSO census **2001**) ಮಾತು-ಭಾಷಾ ದೋಷಗಳ ಪ್ರಮಾಣ ಶೇಕಡ 5ರಿಂದ 6ರಷ್ಟಿದೆ ಎಂದು ಗೋಚರವಾಗಿದೆ. ಅದರಲ್ಲೂ ಮಾತಿನ ದೋಷಗಳ ಪ್ರಮಾಣವು ಮಕ್ಕಳಲ್ಲಿ ಹೆಚ್ಚಾಗಿದ್ದು, ವಯಸ್ಕರಲ್ಲಿ ಕಡಿಮೆಯಿರುವುದು ತಿಳಿದುಬಂದಿದೆ. ಅಂಕಿ-ಅಂಶಗಳ ಶೋಧನೆ ನಡೆಸಲು ಉತ್ತಮ ಗುಣಮಟ್ಟದ ಮಾಹಿತಿ ಸಂಗ್ರಹಣೆ ಮತ್ತು ಅಪಾಯದ ಅಂಚಿನಲ್ಲಿರುವ ವ್ಯಕ್ತಿಗಳನ್ನು ಗುರುತಿಸುವ ಅಂಶಗಳನ್ನು ಅರಿಯುವುದು ಬಹು ಮುಖ್ಯ.

# ಅಭ್ಯಾಸ-2

1) ಭಾಷೆಯ ಬೆಳವಣಿಗೆಗೆ ಪೂರಕವಾಗಿರುವ ಅಂಶಗಳನ್ನು ಗುರುತುಹಾಕಿ

2) ಮಾತಿನ ಕ್ರಿಯೆಗೆ ಸಹಾಯ ಮಾಡುವ ಅಂಗಗಳು ಯಾವುವು ?

3) ಮಾತಿನ ವಿವಿಧ ಹಂತಗಳಾವುವು ?

4) ಮಾತು/ಭಾಷಾ ದೋಷಗಳನ್ನು ಗುರುತಿಸಿ ಪಟ್ಟಿಮಾಡಿ

# ಅಧ್ಯಾಯ–3

# ಮಾತು–ಭಾಷೆಯ ದೋಷ: ಸ್ಥಿತಿಗಳು ಮತ್ತು ಕಾರಣಗಳು

**1) ಮಾತು ಮತ್ತು ಭಾಷೆಯಲ್ಲಿ ದೋಷಗಳು ಉಂಟಾಗಲು ಯಾವ ಯಾವ ಅಂಶಗಳು ಕಾರಣಗಳಾಗಿವೆ?**

ಮಾತು ಮತ್ತು ಭಾಷೆಯ ದೋಷಗಳುಂಟುಮಾಡುವ ಕಾರಣಗಳನ್ನು ವಿವಿಧ ಬಗೆಯಲ್ಲಿ ವಿಂಗಡಿಸಲಾಗಿದೆ. ಚಿಕಿತ್ಸೆ / ಪರಿಹಾರ / ತರಬೇತಿಯನ್ನು ಸೂಚಿಸಲು ಸಹಾಯವಾಗುವಂತೆ ಕಾರಣಗಳನ್ನು ಸಾಮಾನ್ಯವಾಗಿ ದೈಹಿಕ (structural), ಕ್ರಿಯಾತ್ಮಕ (functional) ಎಂದು ವಿಂಗಡಿಸಲಾಗಿದೆ. ಇದಲ್ಲದೆ ಅನುವಂಶೀಯತೆಯಿಂದ ವೃದ್ಧಾಪ್ಯದವರೆಗೂ ಹಲವಾರು ಕಾರಣಗಳನ್ನು ಸಂಶೋಧನೆಗಳು ಖಚಿತಪಡಿಸಿವೆ. ಕೆಳಗೆ ಕೊಟ್ಟಿರುವ ಪಟ್ಟಿ ಕೆಲವು ಮುಖ್ಯ ಕಾರಣಗಳನ್ನು ಸೂಚಿಸುತ್ತದೆ.

i) **ವಂಶವಾಹೀ ಕಾರಣಗಳು:** ಈ ಮೊದಲೇ ಕುಟುಂಬದ ಹಿರಿಯರಲ್ಲಿ ಯಾರಿಗಾದರೂ ಮಾತು–ಭಾಷೆಯ ದೋಷವಿದ್ದಲ್ಲಿ ಹುಟ್ಟುವ ಮಕ್ಕಳಿಗೂ ಈ ದೋಷಗಳು ಉಂಟಾಗುವ ಸಾಧ್ಯತೆಗಳಿವೆ.

ii) **ಗರ್ಭಾವಸ್ಥೆಯಲ್ಲಿ ಉಂಟಾಗುವ ಕಾರಣಗಳು:** ಅಧಿಕ ರಕ್ತದೊತ್ತಡ, ಮೂತ್ರಪಿಂಡದ ಸೋಂಕು, ಕ್ಷ–ಕಿರಣಕ್ಕೊಳಗಾಗುವುದು, ವಿಟಮಿನ್‌ಗಳ ತೀವ್ರ ಕೊರತೆ, ಗ್ರಂಥಿಗಳು ಸರಿಯಾಗಿ ಕೆಲಸ ಮಾಡದಿರುವುದು, ಜರ್ಮನ್ ದಢಾರ, ತಾಯಿ ಮತ್ತು ಭ್ರೂಣದ ಜೀವ ರಾಸಾಯನಿಕ ಹೊಂದಾಣಿಕೆಯಿಲ್ಲದಿರುವುದು ಕಾರಣವಾಗಬಹುದು.

**ಅ) ತಾಯಿಯು ಗರ್ಭಿಣಿಯಾಗಿರುವಾಗ :**

ಬೆಳೆಯುತ್ತಿರುವ ಭ್ರೂಣದ ಮುಖ ಮತ್ತು ಬಾಯಿಯ ಅಂಗಳಿನ ನಡುವೆ ಭ್ರೂಣದ ನಾಲಿಗೆ ಅಥವಾ ಬೆರಳು, ಭ್ರೂಣದ ಪೊರೆಯ ಕಟ್ಟು ಅಡ್ಡಬಂದರೆ ಎರಡು ಭಾಗಗಳು ಸೇರಲು ಅವಕಾಶವಿಲ್ಲದೆ ಮಧ್ಯೆ ಸೀಳು ತುಟಿ/ ಸೀಳು ಅಂಗುಳು ಹಾಗೇ ಉಳಿಯಬಹುದು.

ಈ ಸ್ಥಿತಿ ವಂಶಪಾರಂಪರ್ಯವಾಗಿ ಬರುತ್ತದೆಂದು ಕೆಲವರು ಅಭಿಪ್ರಾಯಪಡುತ್ತಾರೆ. ತಾಯಿಗೆ ಬರುವ

ಅಂಟುರೋಗಗಳು, ತಾಯಿಯ ಅತಿಯಾದ ಕ್ಷಕಿರಣ ಮತ್ತು ವಿಕಿರಣಗಳಿಗೊಳಗಾಗುವುದು–ಇವುಗಳಿಂದಾಗಿ ಈ ಸೀಳುತುಟಿ/ಸೀಳುಅಂಗುಳು ಉಂಟಾಗಬಹುದು.

**ಆ) ಜನನ ಕಾಲದಲ್ಲಿ**: ಹೆರಿಗೆ ಸಮಯದಲ್ಲಿ ಫೋರ್‌ಸೆಪ್ಸ್(ಚಿಮುಟ)ನ ಬಳಕೆ, ಸಿಸೇರಿಯನ್ ಶಸ್ತ್ರ ವಿಧಾನ, ಅಮ್ಲಜನಕದ ಕೊರತೆಯಿಂದಾಗಿ ಶಿಶುವಿನ ಮಿದುಳಿಗೆ ಹಾನಿ, ನಿಗದಿತ ಅವಧಿಗೆ ಮೊದಲೇ ಶಿಶುವಿನ ಜನನ ಅಥವಾ ದೀರ್ಘಕಾಲ ಹೆರಿಗೆ ಬೇನೆಯ ನಂತರ ಜನಿಸುವ ಶಿಶು – ಇವೆಲ್ಲವುಗಳಿಂದ ಶಿಶುವಿನ ಮಿದುಳಿಗೆ ಹಾನಿಯುಂಟಾಗುವ ಪ್ರಮಾಣ ಹೆಚ್ಚೆಂದು ಸಂಶೋಧನೆಗಳು ಸಾಬೀತುಪಡಿಸಿವೆ.

**ಇ) ಜನನಾನಂತರ**: ಅಪಸ್ಮಾರ, ತಲೆಗೆ ಪೆಟ್ಟಾಗುವುದು, ಮಿದುಳು ಜ್ವರ ಅಥವಾ ಇನ್ನಿತರ ಸೋಂಕು ರೋಗಗಳು, ದೈಹಿಕ/ಮಾನಸಿಕ ಬೆಳವಣಿಗೆಯ ಕ್ಷೀಣತೆ/ಸಾಮಾಜಿಕ/ಪರಿಸರಗಳ ಪರಿಣಾಮ ಮುಂತಾದವುಗಳು ಕೂಡ ಮಾತು ಮತ್ತು ಭಾಷೆಯ ಬೆಳವಣಿಗೆಗೆ ತಡೆಯುಂಟುಮಾಡುತ್ತವೆ.

## 13) ಮಾತಿನ ಅವಯವಗಳ ವೈಕಲ್ಯತೆಗೆ ಕಾರಣವಾಗುವ ಅಂಶಗಳು ಯಾವುವು ?

* ಸೀಳು ತುಟಿ/ಸೀಳು ಅಂಗುಳು
* Submucous cleft/ನಾಲಿಗೆ ಹಿಡಿದಿರುವಿಕೆ
* ಎತ್ತರದ ಅಂಗಳು/ಅಂಗಳಿನ ನಿಸ್ಸತ್ವತೆ
* ಹಲ್ಲುಗಳ ವಕ್ರತೆ
* ಧ್ವನಿತಂತುಗಳ ವೈಕಲ್ಯತೆ
* ಮೆದುಳಿನ ಘಾತ
* ಅಪಸ್ಮಾರ
* ಅಪಘಾತ
* ಮಿದುಳುಜ್ವರ (Encephalitis) ಇವುಗಳು ಮಾತಿನ ವೈಫಲ್ಯತೆಗೆ ಕಾರಣವಾಗಬಹುದು.

**ಇತರೆ :**

ಇದಲ್ಲದೆ ಜ್ಞಾನೇಂದ್ರಿಯಗಳ ದೋಷಗಳು – ಕಿವಿ/ಕಣ್ಣು, ಮಾನಸಿಕ / ಭಾವನಾತ್ಮಕ, ಅಥವಾ ಸಂಜ್ಞಾನಾತ್ಮಕ/ ಸಾಮಾಜಿಕ ಕಾರಣಗಳು ಇರಬಹುದು.

ಮಾತು–ಭಾಷಾ ದೋಷಯುಕ್ತ ಒಂದು ಮಗು ಅಥವಾ ವ್ಯಕ್ತಿಯಲ್ಲಿ ಮೇಲೆ ಹೇಳಿದ ಕಾರಣಗಳು ಪ್ರತ್ಯೇಕವಾಗಿ ಕಾಣಬಹುದು. ಒಂದು ಕಾರಣದ ತೀವ್ರತೆ ಇನ್ನೊಂದಕ್ಕಿಂತ ಕಡಿಮೆ ಅಥವಾ ಹೆಚ್ಚಾಗಿರುವ ಸಾಧ್ಯತೆ ಇದೆ. ಅಥವಾ, ಒಂದು ಕಾರಣದಿಂದಲೇ ಇನ್ನೊಂದು ಕಾರಣ ಉದ್ಭವಿಸುವ ಸಾಧ್ಯತೆಯೂ ಇದೆ. ಆದುದರಿಂದ ಚಿಕಿತ್ಸೆ ಮತ್ತು ತರಬೇತಿ ಯೋಜಿಸುವ ಮುನ್ನ ಮಗು/ವ್ಯಕ್ತಿಯಲ್ಲಿ ದೋಷ ಕಂಡುಬರಲು ಕಾರಣಗಳನ್ನು ಕೂಲಂಕಷವಾಗಿ ವಿಶ್ಲೇಷಿಸುವುದು ಬಹು ಮುಖ್ಯ.

## 14) ಒಂದು ಮಗು ಮತ್ತು ವ್ಯಕ್ತಿಯಲ್ಲಿ ಮಾತು ಮತ್ತು ಭಾಷೆಯ ತೊಂದರೆಗಳೆರಡೂ ಸೇರಿಕೊಂಡಿರುವ ಸಾಧ್ಯತೆ ಇದೆಯೇ?

ಮಾತು ಮತ್ತು ಭಾಷೆಯ ತೊಂದರೆಗಳು ಒಂದು ಮಗು ಅಥವಾ ವ್ಯಕ್ತಿಯಲ್ಲಿ ಏಕಕಾಲದಲ್ಲಿ ಕಂಡುಬರಬಹುದು. ಕೆಲವು ಬಾರಿ ಇವೆರಡರಲ್ಲಿ ಯಾವುದೇ ಒಂದು ದೋಷದ ಲಕ್ಷಣಗಳು ಮಾತ್ರ ಕಂಡುಬರಬಹುದು. ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದುದೇನೆಂದರೆ, ಒಂದು ಸಮಸ್ಯೆ ಮತ್ತೊಂದು ಸಮಸ್ಯೆಯ ಮೇಲೆ ಪ್ರಭಾವ ಬೀರಿ ಮಾತು ಮತ್ತು ಭಾಷೆಯ ಎರಡೂ ತೊಂದರೆಗಳನ್ನು ಉಂಟುಮಾಡಬಹುದು, ಅಥವಾ ಸಮಸ್ಯೆಯ ತೀವ್ರತೆಯನ್ನು ಇನ್ನೂ ಹೆಚ್ಚಿಸಬಹುದು. ಇದನ್ನು ಪರೀಕ್ಷೆಯಿಂದ ಮಾತ್ರ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು.

# ಅಭ್ಯಾಸ–3

1) ಮಾತು/ಭಾಷೆಯ ದೋಷಗಳು ಉಂಟಾಗಲು ಪ್ರಮುಖ ಕಾರಣಗಳನ್ನು ಗುರುತುಹಾಕಿ.

2) ಜನನಕಾಲದಲ್ಲಿ ಉಂಟಾಗುವ ಮಾತಿನ ದೋಷಗಳಿಗೆ ಕಾರಣ ನೀಡಿ.

3) ಸೀಳುತುಟಿ ಹೇಗೆ ಉಂಟಾಗುತ್ತದೆ?

4) ಮಾತಿಗೆ ಸಹಕಾರಿಯಾಗುವ ಅಂಗಗಳ ವೈಕಲ್ಯಗಳು ಉಂಟಾಗಲು ಕಾರಣಗಳನ್ನು ಪಟ್ಟಿಮಾಡಿ.

# ಅಧ್ಯಾಯ–4

# ಮಾತು–ಭಾಷೆಯ ದೋಷ: ಗುಣಲಕ್ಷಣಗಳು

## 1) ಮಾತು ಮತ್ತು ಭಾಷೆಯ ತೊಂದರೆಗಳಲ್ಲಿನ ಗುಣಲಕ್ಷಣಗಳು ಏನು?

ಮಾತು–ಭಾಷೆಯಲ್ಲಿ ದೋಷವುಳ್ಳ ಮಕ್ಕಳು ಅಥವಾ ವ್ಯಕ್ತಿಗಳಲ್ಲಿ ಹಲವಾರು ಗುಣಲಕ್ಷಣಗಳಿರುತ್ತದೆ. ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಈ ಗುಣಲಕ್ಷಣಗಳನ್ನು ಅರಿತು, ದೋಷವುಳ್ಳ ಮಗು/ವ್ಯಕ್ತಿಯನ್ನು ಗುರುತಿಸಿದಲ್ಲಿ ಮಾತು–ಭಾಷಾ ಸ್ಥಿತಿಗಳನ್ನು ಪ್ರಾರಂಭದಲ್ಲೇ ಪತ್ತೆಹಚ್ಚಿ, ಸೂಕ್ತವಾದ ನಿರ್ವಹಣೆಯಿಂದ ಅದು ಉಲ್ಬಣವಾಗದಂತೆ ಮಾಡುವುದು ಸಾಧ್ಯ. ಎಲ್ಲಾ ಗುಣಲಕ್ಷಣಗಳು ಪ್ರತಿಯೊಂದು ಸ್ಥಿತಿಗೂ ಪ್ರತ್ಯೇಕವಾಗಿರಲೇಬೇಕೆಂಬ ನಿಯಮವೇನಿಲ್ಲ. ಹೆಚ್ಚುವರಿ ಸ್ಥಿತಿಗಳು ಕೆಲವು ಮುಖ್ಯ ಗುಣಲಕ್ಷಣಗಳಲ್ಲಿ ಮಾತ್ರ ವೈವಿಧ್ಯತೆಯನ್ನು ತೋರುತ್ತದೆ. ಆದರೆ ಕೆಲವು ಗುಣಲಕ್ಷಣಗಳ ತೀವ್ರತೆ ಆಯಾ ಸ್ಥಿತಿಗೆ ತಕ್ಕಂತೆ ಮಾರ್ಪಾಡು ಹೊಂದಿ ರೋಗನಿದಾನಕ್ಕೆ ಸಹಾಯಕಾರಿಯಾಗುತ್ತದೆ.

### A) ಉಚ್ಚಾರಣಾ ದೋಷಗಳ ಗುಣಲಕ್ಷಣಗಳು :

ಉಚ್ಚಾರಣಾ ದೋಷಗಳು ಸಾಮಾನ್ಯವಾಗಿ ಚಿಕ್ಕ ವಯಸ್ಸಿನ ಮಕ್ಕಳಲ್ಲಿ ಕಂಡುಬರುವುದು. ಚಿಕಿತ್ಸೆ ಮತ್ತು ತರಬೇತಿ ನೀಡದಿದ್ದರೆ ವಯಸ್ಕರಲ್ಲೂ ಮುಂದುವರಿಯುವುದು.

- ಮಾತಿನ ಅವಯವಗಳಾದ ತುಟಿ, ದವಡೆ, ನಾಲಿಗೆ, ಅಂಗಳು, ಮೂಗು ಇವುಗಳ ರಚನಾದೋಷ
- ತನ್ನ ವಯಸ್ಸಿನ ಮಕ್ಕಳೊಡನೆ ಹೋಲಿಸಿದಾಗ ಮಾತಿನ ಸ್ವರ/ವ್ಯಂಜನಗಳ ಉಚ್ಚಾರಣೆಯಲ್ಲಿ ಅಸ್ಪಷ್ಟತೆ ಕಂಡುಬರುವುದು
- ಮಾತಿನ ಸ್ವರಗಳ ಜೋಡಣೆಯಲ್ಲಿ ಅದಲು–ಬದಲಾಗಿರುವಿಕೆ
- ಮಾತಿನ ಶಬ್ದಗಳ ವ್ಯತ್ಯಾಸ ಕಂಡು ಹಿಡಿಯದಿರುವುದು.
- ಶ್ರವಣದೋಷ, ಬುದ್ಧಿ ಮಾಂದ್ಯತೆ ಅಥವಾ ಮಿದುಳಿನ ನಿಸ್ಸತ್ವತೆಯ ಸ್ಪಷ್ಟ ಸೂಚನೆ ಕಾಣುವುದು
- ಉಚ್ಚಾರಣಾ ದೋಷವುಳ್ಳ ಮಕ್ಕಳನ್ನು ಕಂಡು ಅನುಕರಿಸುವುದು
- ಮಕ್ಕಳು ಮಾನಸಿಕ ಬಾಧೆಯಿಂದ ನರಳುತ್ತಿರುವಾಗ ಪೋಷಕರ/ಶಿಕ್ಷಕರ ಗಮನ ಸೆಳೆಯಲು ಅಸ್ಪಷ್ಟ ಉಚ್ಚಾರಣೆ ಮುಂದುವರಿಸುವುದು
- 3–4 ಭಾಷೆಗಳನ್ನು ಒಟ್ಟಿಗೆ ಕಲಿಯುವ ಪ್ರಸಂಗವಿರುವ ಮಕ್ಕಳು ಹಲವಾರು ಬಾರಿ ಗೊಂದಲಕ್ಕೀಡಾಗುವುದು.




ಉಚ್ಚಾರಣಾ ದೋಷವುಳ್ಳ

## ಉಚ್ಚಾರಣಾ ದೋಷಗಳಿಂದ ಉಂಟಾಗುವ ತೊಂದರೆಗಳು

ಈ ದೋಷವಿರುವ ಮಕ್ಕಳಲ್ಲಿ ಎರಡು ವಿಧವಾದ ತೊಂದರೆಗಳು ಕಾಣಿಸಿಕೊಳ್ಳುತ್ತದೆ. ಮೊದಲನೆಯದು ಆಹಾರ ತೆಗೆದುಕೊಳ್ಳುವುದರಲ್ಲಿ ಮತ್ತು ಎರಡನೆಯದು ಮಾತನಾಡುವುದರಲ್ಲಿ.

### i) ಆಹಾರ ತೆಗೆದುಕೊಳ್ಳುವುದು

ಸಾಧಾರಣವಾಗಿ ಮಗುವು ತುಟಿ ಮತ್ತು ನಾಲಿಗೆಗಳ ನಡುವೆ ಶೂನ್ಯಸ್ಥಿತಿಯನ್ನು ಸೃಷ್ಟಿಸಿಕೊಂಡು ಅಥವಾ ಬಾಯಿಯಲ್ಲಿ ಗಾಳಿಯ ಒತ್ತಡವನ್ನು ಅತಿ ಕಡಿಮೆ ಮಾಡಿಕೊಂಡು ಹಾಲನ್ನು ಒಳಗೆಳೆದುಕೊಳ್ಳುತ್ತದೆ. ಅಂಗಳಿನಲ್ಲಿ ಸೀಳಿದ್ದರೆ ಈ ಕಡಿಮೆ ಒತ್ತಡದ ಸ್ಥಿತಿಯನ್ನು ಸೃಷ್ಟಿಸಲು ತೊಂದರೆ ಉಂಟಾಗಿ ಕುಡಿದ ಹಾಲು ಮೂಗಿನಿಂದ ಹೊರಬರುತ್ತದೆ. ಇದಕ್ಕಾಗಿ ಚಿಕ್ಕಂದಿನಿಂದಲೇ ವೈದ್ಯರ ಸಲಹೆ ಅತ್ಯಗತ್ಯ. ವೈದ್ಯರು ಮಗುವು ಹಾಲನ್ನು ಕುಡಿದಾಗ ಮೂಗಿನಿಂದ ಹೊರಬರುವುದನ್ನು ತಡೆಗಟ್ಟುವ ಉಪಾಯವನ್ನು ತಿಳಿಸಿಕೊಡುತ್ತಾರೆ.

### ii) ಮಾತನಾಡುವುದು

ಮಾತು ಮಗುವು ಕಲಿಯುವುದರಿಂದ ಬರುತ್ತದೆ. ಮಾತಿನ ಬೆಳವಣಿಗೆಗೆ ಮಾತಿಗೆ ಸಂಬಂಧಪಟ್ಟ ಅಂಗಾಂಗಗಳು, ಸುತ್ತಣ ಪರಿಸರ ಇವೆಲ್ಲವೂ ಯಥಾಸ್ಥಿತಿಯಲ್ಲಿರಬೇಕು. ಆದರೆ ಮಾತಿನ ಬೆಳವಣಿಗೆಗೆ ಮುಖ್ಯವಾದ ಒಂದು ಅಂಶವಾದ ಉಚ್ಚಾರಣಾಂಗಗಳು ಮಗುವಿನಲ್ಲಿ ಸರಿಯಿಲ್ಲದೇ ಹೋದರೆ ಉಚ್ಚಾರಣೆಯ ತೊಂದರೆ ಉಂಟಾಗುತ್ತದೆ. ಸೀಳು ಅಂಗಳಿರುವ ಮಗುವಿನಲ್ಲಿ ಬಾಯಿ ಮತ್ತು ಮೂಗಿನ ಕುಳಿಗಳು ಬೇರ್ಪಟ್ಟಿರುವುದಿಲ್ಲ. ಇದರಿಂದಾಗಿ ಮಗುವಿನ ಮಾತಿನ ಮತ್ತು ಭಾಷೆಯ ಬೆಳವಣಿಗೆ, ಉಚ್ಚಾರಣೆ ಮತ್ತು ಸ್ವರ ಇವೆಲ್ಲವೂ ದೋಷಪೂರ್ಣವಾಗಿರಬಹುದು.

### iii) ಭಾಷೆಯ ಬೆಳವಣಿಗೆ

ಇಂತಹ ಮಕ್ಕಳು ಇತರರ ಮಾತನ್ನು ಅರ್ಥಮಾಡಿಕೊಂಡರೂ ಸಹ ಇವರ ಭಾಷೆಯ ಬೆಳವಣಿಗೆ ಇತರರಿಗೆ ಹೋಲಿಸಿದಲ್ಲಿ ಕುಂಠಿತವಾಗಿರುತ್ತದೆ. ಈ ಮಕ್ಕಳು ಸರಾಸರಿ ಉಪಯೋಗಿಸುವ ವಾಕ್ಯದ ಉದ್ದ, ವಾಕ್ಯದ ರೀತಿ, ಅದರ ಕ್ಲಿಷ್ಟತೆ, ವಿವಿಧ ಪದಗಳು ಈ ಎಲ್ಲವೂ ಇತರ ಮಕ್ಕಳಿಗಿಂತ ಕಡಿಮೆಯಿರುತ್ತದೆ.

### iv) ಉಚ್ಚಾರಣೆ

ಸೀಳು ತುಟಿ/ಸೀಳು ಅಂಗುಳಿಂದಾಗಿ ಅಂಗಳಿನ ಚಲನೆಯಲ್ಲಿ ತೊಂದರೆ, ನಾಲಿಗೆಯ ಚಲನೆಯಲ್ಲಿ ತೊಂದರೆ, ಹಲ್ಲುಗಳ ದೋಷಗಳು, ಕಿವಿಯ ತೊಂದರೆ, ಮೆದುಳಿಗೆ ಬಿದ್ದ ಪೆಟ್ಟು, ಬುದ್ಧಿಮಾಂದ್ಯತೆ ಮತ್ತು ಮಾನಸಿಕ ತೊಂದರೆಗಳ ಕಾರಣದಿಂದಾಗಿ ಉಚ್ಚಾರಣೆ ದೋಷಯುಕ್ತವಾಗಿರಬಹುದು.

### v) ಸೀಳು ತುಟಿ/ಸೀಳು ಅಂಗಳಿಗೆ ಚಿಕಿತ್ಸೆ ಏನು?

ಸಾಧಾರಣವಾಗಿ ಮಗುವಿಗಿರುವ ತುಟಯ ಒಡಕನ್ನು ಒಂದನೇ ತಿಂಗಳೊಳಗಾಗಿಯೂ ಅಂಗುಳಿನ ಒಡಕನ್ನು ಒಂದು ವರ್ಷದ ಒಳಗಾಗಿಯೂ ಶಸ್ತ್ರಚಿಕಿತ್ಸೆಯಿಂದ ಸರಿಮಾಡುತ್ತಾರೆ. ಅಂಗುಳಿನ ಶಸ್ತ್ರಚಿಕಿತ್ಸೆ ಒಂದೇ ಬಾರಿಗೆ ಮಾಡಲಾಗದಿರಬಹುದು. ಆದರೆ 2–3 ಬಾರಿ ಶಸ್ತ್ರಚಿಕಿತ್ಸೆ ಮಾಡಿ ಸರಿಮಾಡುತ್ತಾರೆ. ರೋಗಿಯು ಶಸ್ತ್ರಚಿಕಿತ್ಸೆಗೆ ಯೋಗ್ಯ ಅಲ್ಲದಿದ್ದರೆ ಆಗ prosthesis (ಕೃತಕ ಅಂಗುಳು) ಅನ್ನು ನೀಡಬಹುದು.

ಶಸ್ತ್ರಚಿಕಿತ್ಸೆ ಮಾಡಿದ ಮೇಲೂ ಅಥವಾ ಕೃತಕ ಅಂಗಳನ್ನು ಹಾಕಿದ ಮೇಲೂ ಸಹ ಮಾತಿನ ತೊಂದರೆ ಹಾಗೆಯೇ ಇರಬಹುದು. ಶಸ್ತ್ರಚಿಕಿತ್ಸೆ ಭಾಗಶಃ ಅಥವಾ ಸಂಪೂರ್ಣ ಯಶಸ್ವಿಯಾಗಿರಬಹುದು. ಇದರಿಂದಾಗಿ ಮಾತಿನ ತೊಂದರೆಗಳು ಹಾಗೇ ಉಳಿದಿರಬಹುದು. ಅಥವಾ ಶಸ್ತ್ರಚಿಕಿತ್ಸೆ ಯಶಸ್ವಿಯಾಗಿದ್ದರೂ ಸಹ ಹಳೆಯ ಮಾತಿನ



ಸೀಳು ತುಟಿಯುಳ್ಳ ಮಗು

ದೋಷಗಳು ಅದೇ ರೀತಿ ಮುಂದುವರೆಯಬಹುದು. ಈ ಮಾತಿನ ತೊಂದರೆ ಸ್ವರದ ಅಥವಾ ಉಚ್ಚಾರಣೆಯ ತೊಂದರೆ ಆಗಿರಬಹುದು ಅಥವಾ ಭಾಷೆಯ ತೊಂದರೆಯಾಗಿರಬಹುದು. ಇದರಿಂದ ಮಗುವು ಸಂವಹನ ನಡೆಸಲು ಕಷ್ಟಪಡುತ್ತದೆ. ಆದಷ್ಟು ಬೇಗ ಸಮೀಪದಲ್ಲಿರುವ ಮಾತು–ಭಾಷಾ ದೋಷ ತಜ್ಞರನ್ನು ಭೇಟಿಯಾಗಿ ಮಗುವಿನ ಮಾತಿನ ದೋಷವನ್ನು ಸರಿಪಡಿಸಬೇಕು. ಈ ಚಿಕಿತ್ಸೆಯು ಸಾಧಾರಣವಾಗಿ ಇಂತಿಷ್ಟೇ ದಿನಗಳಲ್ಲಾಗುತ್ತದೆ ಎಂದು ಹೇಳಲಾಗುವುದಿಲ್ಲ. ಅದು ನಿಮ್ಮ ಮತ್ತು ನಿಮ್ಮ ಮಗುವಿನ ಅಭ್ಯಾಸಗಳ ಮೇಲೆ ಅವಲಂಬಿಸಿರುತ್ತದೆ. ಮಾತಿನ–ದೋಷ ಚಿಕಿತ್ಸೆಯಲ್ಲಿ ಸಾಧಾರಣವಾಗಿ ಬಾಯಿಯಲ್ಲೇ ಗಾಳಿಯನ್ನು ತಡೆಹಿಡಿಯಲು (ಅಂದರೆ ಮೂಗಿನಿಂದ ಗಾಳಿಹೋಗದಂತೆ ನೋಡಿಕೊಳ್ಳಲು) ಅಭ್ಯಾಸಗಳು, ಸರಿಯಾದ ಉಚ್ಚಾರಣೆಯನ್ನು ಮಾಡಲು ಅಭ್ಯಾಸಗಳು– ಇವುಗಳನ್ನು ಹೇಳಿಕೊಡುತ್ತಾರೆ. ಈ ರೀತಿಯ ದೋಷಗಳಿಗೆ ಪರೀಕ್ಷೆ ಮತ್ತು ಚಿಕಿತ್ಸೆ ಮೈಸೂರಿನ ಅಖಿಲಭಾರತ ವಾಕ್–ಶ್ರವಣ ಸಂಸ್ಥೆಯಲ್ಲಿ ದೊರೆಯುತ್ತದೆ.

## B) ತೊದಲು ಅಥವಾ ಉಗ್ಗುವಿಕೆಯ ಗುಣಲಕ್ಷಣಗಳು

ಮಾತಿನ ನಿರರ್ಗಳತೆಯಲ್ಲಿ ತಡೆಯುಂಟಾದಾಗ ತೊದಲೆಂದು ಕರೆಯುತ್ತೇವೆ. ಇದು ಎಳೆಯ ವಯಸ್ಸಿನಿಂದ ವೃದ್ಧಾಪ್ಯದವರೆಗೂ ಯಾವುದೇ ವ್ಯಕ್ತಿಯಲ್ಲಿ ಕಾಣಬಹುದು. ಒಂದು ವರ್ಷದ ಮಗು ತಪ್ಪು ಹೆಜ್ಜೆ ಹಾಕಿ ನಡಿಗೆ ಕಲಿಯುವಂತೆ 2–2$^1/_2$ ವರ್ಷದ ಮಗು ತೊದಲ್ನುಡಿಯಾಡುವುದು ಸರ್ವೇ ಸಾಮಾನ್ಯ. ಇಂತಹ ಸ್ಥಿತಿಯನ್ನು ಸಹಜ ತಡವರಿಕೆ ಎಂದು ಕರೆಯುತ್ತೇವೆ. ಸಹಜ ತಡವರಿಕೆಯ ಸ್ಥಿತಿಗೆ ಪೋಷಕರು ಹೆಚ್ಚಿನ ಗಮನ ಹರಿಸಬೇಕು. ಮಗುವಿಗೆ ಆತಂಕ ಒಡ್ಡಿದಾಗ ಮಗು ಗೊಂದಲಕ್ಕೊಳಗಾಗಿ ತೊದಲು 10 ಮೆಟ್ಟಲು ಅಂದ್ರೆ ಮೆಟ್ಟಲೇ ಹತ್ತುತ್ತಿದ್ದಾನಲ್ಲ! ಒಳಪಡುವ ಸಾಧ್ಯತೆ ಹೆಚ್ಚು.

ಪದೇ ಪದೇ ಪದಗಳನ್ನು/ಸ್ವರಗಳನ್ನು ಉಚ್ಚರಿಸುವುದು, ಎಳೆಯುವುದು/ನಿಲ್ಲಿಸಿ ಮಾತನಾಡುವುದು/ ಸಂಬಂಧವಿಲ್ಲದ ಮಾತಿನ ಶಬ್ದಗಳನ್ನು ಮಧ್ಯೆ ತೂರಿಸುವುದು/ಹೆದರಿ ಮಾತನಾಡುವುದು/ಕೈ/ಕಾಲು/ಕಣ್ಣು/ಇನ್ನಿತರ ಅಂಗ ಚೇಷ್ಟೆಗಳನ್ನು ಮಾಡುವುದು/ಕ್ಲಿಷ್ಟ ಸಂವಹನ ಪರಿಸ್ಥಿತಿಯಲ್ಲಿ (ಹೊರಗಿನವರೊಂದಿಗೆ ಮಾತನಾಡುವಾಗ, ಶಿಕ್ಷರೊಂದಿಗೆ, ಹಿರಿಯರೊಂದಿಗೆ) ತೊದಲು ಹೆಚ್ಚಾಗುವುದು. ಇವೆಲ್ಲ ಗುಣಲಕ್ಷಣಗಳಿಂದ ಇಂತಹ ಸ್ಥಿತಿಯನ್ನು ಕಂಡುಹಿಡಿಯುವುದು ಬಹಳ ಸುಲಭ. ನಂತರ ಅದಕ್ಕೆ ಸೂಕ್ತ ಸಲಹೆ/ಸೂಚನೆಗಳನ್ನು ತಕ್ಕ ಅವಧಿಯಲ್ಲಿ ಕೊಡಿಸುವುದೂ ಬಹಳ ಮುಖ್ಯ.

### i. ಗೊಂದಲಗೊಳಿಸುವ ತೊದಲು (Cluttering)




ಗೊಂದಲಗೊಳಿಸುವ ತೊದಲುಳ್ಳ ಮಗು

ತೊದಲುಂಟುಮಾಡುವ ಸ್ಥಿತಿ ಯಾವಾಗಲೂ ಒಂದೇ ರೀತಿಯದ್ದಾಗಿರಬೇಕೆಂದಿಲ್ಲ. ಹಲವು ರೀತಿಯ ತೊದಲಿನ ಸ್ಥಿತಿ ತೊದಲುವ ವ್ಯಕ್ತಿಗೆ ಮತ್ತು ಕೇಳುಗನಿಗೆ ಗೊಂದಲ ಉಂಟುಮಾಡುತ್ತದೆ. ಇಂತಹ ಸ್ಥಿತಿಯನ್ನು (Cluttering) 'ಗೊಂದಲಗೊಳಿಸುವ ತೊದಲು' ಎಂದು ಕರೆಯಬಹುದು. ಇಂತಹ ಸ್ಥಿತಿಯಲ್ಲಿ ಸಾಮಾನ್ಯವಾಗಿ ತೊದಲುವ ವ್ಯಕ್ತಿಗೆ ತಾನು ತೊದಲುತ್ತೇನೆ ಎಂಬ ಅರಿವೇ ಇರುವುದಿಲ್ಲ. ಮೇಲಾಗಿ ಅವನ(ಳ) ತೊದಲು ಯಾವಾಗಲೂ ಒಂದೇ ರೀತಿಯದ್ದಾಗಿರುತ್ತದೆ ಅಥವಾ ಇರಲೇಬೇಕು ಎಂಬ ನಿಯಮವೇನಿಲ್ಲ. ತೊದಲುವ ವ್ಯಕ್ತಿಯು ಮಾತಿನ ನಿರರ್ಗಳತೆಯ ತೊಂದರೆಯೊಂದಿಗೆ ವಾಕ್ಯರಚನೆ, ಅಂಕಿ–ಸಂಖ್ಯೆಗಳ ಗೊಂದಲ, ಓದು–ಬರೆಯುವಿಕೆಯಲ್ಲಿ ಹಿನ್ನಡೆ, ದಿಕ್ಕುಗಳನ್ನು ಗುರುತಿಸುವುದರಲ್ಲಿ, ನೆನಪಿಡುವುದರಲ್ಲಿ

ತೊಂದರೆ, ಹೀಗೆ ಅನೇಕ ರೀತಿಯ ಗೊಂದಲಕ್ಕೀಡಾಗುವುದು ಸರ್ವೇ ಸಾಮಾನ್ಯ. ಇಂತಹ ಮಗು ಮತ್ತು ವ್ಯಕ್ತಿ ಸಾಮಾನ್ಯವಾಗಿ ಅತಿ ವೇಗವಾಗಿ ಮಾತನಾಡುವುದು, ಮಾತಿನ ಸ್ವರಗಳನ್ನು ಬಿಟ್ಟುಬಿಡುವುದನ್ನು ಕಾಣುತ್ತೇವೆ. ಇಂತಹ ವ್ಯಕ್ತಿಗಳನ್ನು ಗುರುತಿಸುವುದು ಸುಲಭವಾದರೂ ಸಹ ಮೊದಲಿಗೆ ಅವರಿಗೆ ಅವರ ಸ್ಥಿತಿಯ ಬಗ್ಗೆ ತಿಳುವಳಿಕೆ ಮೂಡಿಸಿ, ತರಬೇತಿ ಮತ್ತು ಚಿಕಿತ್ಸೆಯ ಬಗ್ಗೆ ಕಾಳಜಿ ವಹಿಸುವಂತೆ ಎಚ್ಚರಿಕೆ ನೀಡುವುದು ಬಹಳ ಕಷ್ಟದ ಕೆಲಸ.

**ತೊದಲಿನ ಸ್ಥಿತಿ ಮತ್ತು ಗೊಂದಲಗೊಳಿಸುವ ತೊದಲು ಸಾಮಾನ್ಯವಾಗಿ ಹೆಣ್ಣುಮಕ್ಕಳಿಗಿಂತ ಗಂಡುಮಕ್ಕಳಲ್ಲೇ 4:1 ಪ್ರಮಾಣದಲ್ಲಿ ಹೆಚ್ಚಾಗಿ ಕಂಡು ಬರುವುದೆಂದು ಸಂಶೋಧನೆಗಳು ತಿಳಿಸಿವೆ.**

### ii. ನರಮಂಡಲ ದೋಷದಿಂದಾಗುವ ತೊದಲಿನ ಸ್ಥಿತಿ

ತೊದಲು ಯಾವಾಗಲೂ ಎಳೆಯ ಪ್ರಾಯದಲ್ಲೇ ಬರಬೇಕೆಂಬ ನಿಯಮವೇನಿಲ್ಲ. ಮಿದುಳಿಗೆ ಪೆಟ್ಟು ಬಿದ್ದಾಗ ನರಮಂಡಲದ ರಚನೆಯಲ್ಲಿ ಕಾರ್ಯ ದೋಷಗಳು ಉಂಟಾಗುವುದು ಸಹಜ. ಅಂತಹ ಸ್ಥಿತಿಯಲ್ಲಿ ವಾಕ್‌ಸ್ತಂಭ (Aphasia) ಎನ್ನುವ ಸ್ಥಿತಿಗೆ ವ್ಯಕ್ತಿ ಈಡಾಗುತ್ತಾನೆ. ಕ್ರಮೇಣ ವಾಕ್‌ಸ್ತಂಭದ ಸ್ಥಿತಿ ಉತ್ತಮಗೊಳ್ಳುತ್ತಿರುವಂತೆ ವ್ಯಕ್ತಿಯ ಮಾತು ಉತ್ತಮವಾದರೂ ಮಾತಿನ ನಿರರ್ಗಳತೆಯಲ್ಲಿ ಅಲ್ಪ-ಸ್ವಲ್ಪ ಕುಂದು ಕಂಡುಬರುವುದುಂಟು. ಇಂತಹ ಸ್ಥಿತಿಯನ್ನು 'ನರಮಂಡಲ ದೋಷದಿಂದಾಗುವ ತೊದಲು' (Neurogenic stuttering) ಎಂದು ಕರೆಯುತ್ತೇವೆ. ಈ ಸ್ಥಿತಿಯು ವಯಸ್ಕರಲ್ಲಿ ಹಾಗೂ ವಯೋವೃದ್ಧರಲ್ಲೇ ಕಂಡುಬರುವುದು. ಇದರ ಪ್ರಮಾಣ ಮತ್ತು ಕಾಲಮಿತಿ ಬಹಳ ಕಡಿಮೆ ಸ್ವರೂಪದ್ದೆಂದು ಪ್ರತಿಪಾದಿಸಲಾಗಿದೆ. ಇಂತಹ ವ್ಯಕ್ತಿಯು ವಾಕ್ಯದ ಎಲ್ಲಾ ಪದಗಳಲ್ಲೂ ತೊದಲುವುದನ್ನು ಕಾಣುತ್ತೇವೆ. ಇಂತಹ ವ್ಯಕ್ತಿಯು ಪರಿಸ್ಥಿತಿಯ ತೀವ್ರತೆಗನುಗುಣವಾಗಿ ತೊದಲಿನ ಸ್ಥಿತಿಯಲ್ಲಿ ವ್ಯತ್ಯಾಸ ಮಾಡದೇ ಇರುವುದು ಒಂದು ಮುಖ್ಯ ಅಂಶ. ಔಷಧೋಪಚಾರ ಮತ್ತು/ಅಥವಾ ತರಬೇತಿಯಿಂದ ನರಮಂಡಲದ ಸ್ಥಿತಿ ಉತ್ತಮಗೊಳ್ಳುತ್ತಿರುವಂತೆಯೇ ಮಾತಿನ ನಿರರ್ಗಳತೆ ಉತ್ತಮಗೊಳ್ಳುವುದನ್ನೂ ಸಹ ಒಂದು ಮುಖ್ಯ ಅಂಶವೆಂದು ಪರಿಗಣಿಸಬೇಕು.

## C) ಧ್ವನಿದೋಷಗಳು / ಧ್ವನಿ ತೊಂದರೆಗಳು :

ಧ್ವನಿಪೆಟ್ಟಿಗೆಯಿಂದ ಹೊರಬರುವ ಧ್ವನಿಯು ಶ್ರುತಿಬದ್ಧವಾಗಿ, ಇಂಪಾಗಿ ವ್ಯಕ್ತಿಯ ವ್ಯಕ್ತಿತ್ವವನ್ನೇ ಸೂಚಿಸುವ ಒಂದು ಮುಖ್ಯ ಅಳತೆಗೋಲಾಗಿರುತ್ತದೆ. ಸಾಮಾನ್ಯವಾಗಿ ಎಳೆಯ ವಯಸ್ಸಿನ ಮಕ್ಕಳಲ್ಲಿ ಧ್ವನಿಯು ಎತ್ತರದ ಶ್ರುತಿಯಲ್ಲಿದ್ದು, ಬೆಳೆಯುತ್ತಿರುವ ಮಕ್ಕಳಲ್ಲಿ ಅದರ ಅಂಗರಚನಾ ವಿನ್ಯಾಸಕ್ಕೆ ತಕ್ಕಂತೆ ಶ್ರುತಿ ಮಾರ್ಪಾಡು ಹೊಂದುವುದನ್ನು ಕಾಣುತ್ತೇವೆ. ಈ ರೀತಿಯ ಶ್ರುತಿ ಮಾರ್ಪಾಡು ಸಾಮಾನ್ಯದಲ್ಲಿ ಹರೆಯದಲ್ಲಿ ಕಂಡುಬರುತ್ತದೆ. ಹಾಗಾಗಿ ಗಂಡುಮಕ್ಕಳ ಧ್ವನಿ ಹರೆಯದಲ್ಲಿ ವಯಸ್ಕರಂತೆ ಬದಲಾವಣೆ ಹೊಂದುವುದು ಸಹಜ.



ಧ್ವನಿಪೆಟ್ಟಿಗೆಯ ಚಿತ್ರ

ಆದರೆ ಹೆಣ್ಣುಮಕ್ಕಳ ಧ್ವನಿ ಹರೆಯದಲ್ಲಿ ಬದಲಾವಣೆ ಹೊಂದಿದರೂ ಸಹ ಅತಿ ಹೆಚ್ಚು ವ್ಯತ್ಯಾಸ ಹೊಂದಿದಂತೆ ಕಂಡುಬರುವುದಿಲ್ಲ. ವೃದ್ಧಾಪ್ಯದಲ್ಲಿ ಗ್ರಂಥಿಗಳ ವ್ಯತ್ಯಾಸದಿಂದಾಗಿ ಪುನಃ ಗಂಡಸು ಮತ್ತು ಹೆಂಗಸರಲ್ಲಿ ಧ್ವನಿ ಬದಲಾವಣೆಯಾಗುತ್ತದೆ.

ಮೇಲಿನ ಮಾಹಿತಿಯಿಂದ ಧ್ವನಿಯು ಬೆಳವಣಿಗೆಯ ಒಂದು ಅವಿಭಾಜ್ಯ ಅಂಶ ಎಂದು ಸ್ಪಷ್ಟವಾಗಿದೆ. ವಯಸ್ಸಿಗೆ ಅನುಗುಣವಾಗಿ ಅದು ಬದಲಾವಣೆ ಹೊಂದುತ್ತದೆಂದು ತಿಳಿದುಬರುತ್ತದೆ. ಧ್ವನಿ ಪೆಟ್ಟಿಗೆಯ ಧ್ವನಿತಂತುಗಳು ಧ್ವನಿಯನ್ನು ಹೊರಡಿಸಲು ಸಹಾಯಮಾಡುತ್ತದೆ.

**i. ಧ್ವನಿದೋಷಗಳು ಉಂಟಾಗಲು ಸಾಮಾನ್ಯ ಕಾರಣಗಳು**

* ಧ್ವನಿತಂತುಗಳ ರಚನಾವಿನ್ಯಾಸದಲ್ಲಿ ವ್ಯತ್ಯಾಸವುಂಟಾದಾಗ
* ಬೆಳವಣಿಗೆಯಲ್ಲಿ ದೋಷವಿದ್ದಾಗ
* ತಪ್ಪು ಉಪಯೋಗದಿಂದ, ಧ್ವನಿಪದರಗಳ ಖಾಯಿಲೆಯಿಂದ
* ಧ್ವನಿ ಪೆಟ್ಟಿಗೆಗೆ ಆಘಾತ ಉಂಟಾದಾಗ

ಅರ್ಬುದ ರೋಗದಿಂದ ಧ್ವನಿದೋಷಗಳು ಉಂಟಾಗುವುದು. ಇಂತಹ ಸಂದರ್ಭಗಳಲ್ಲಿ ಧ್ವನಿದೋಷವುಳ್ಳ ವ್ಯಕ್ತಿಯನ್ನು ಕೂಲಂಕಷವಾಗಿ ಪರೀಕ್ಷಿಸಿ ಸೂಕ್ತ ಸಲಹೆಗಳನ್ನು ನೀಡಿ, ಧ್ವನಿಯನ್ನು ಉತ್ತಮಗೊಳಿಸುವುದು ಖಂಡಿತ ಸಾಧ್ಯ. ಎಳೆಯ ವಯಸ್ಸಿನಲ್ಲಿ ಮಕ್ಕಳು ಆಟದ ಮೈದಾನದಲ್ಲಿ ಕಿರುಚುವುದು ಸರ್ವೇ ಸಾಮಾನ್ಯ. ವೃತ್ತಿಪರ ಧ್ವನಿ ಉಪಯೋಗಿಸುವ ಶಿಕ್ಷಕರು, ವಕೀಲರು, ವ್ಯಾಪಾರಿಗಳು, ಗಾಯಕರು, ಮುಂತಾದವರು ಧ್ವನಿಯನ್ನು ಸದಾಕಾಲ ಬಳಸುವುದು ಅನಿವಾರ್ಯ. ಇವರೆಲ್ಲಾ ತಮ್ಮ ಧ್ವನಿಯನ್ನು ಕಾಪಾಡಿಕೊಳ್ಳುವುದು ಬಲು ಮುಖ್ಯ. ಧ್ವನಿಯ ಸೂಕ್ತ ಉಪಯೋಗದ ಬಗ್ಗೆ ಹೆಚ್ಚು ಮಾಹಿತಿಯು ಸಂಸ್ಥೆಯ 'ವೃತ್ತಿಪರ ಧ್ವನಿರಕ್ಷಣಾ ಕಕ್ಷೆ'ಯಲ್ಲಿ (Professional Voice Care Unit) ದೊರಕುವುದು.

**ii. ಚಿಕಿತ್ಸೆ**

ಧ್ವನಿಯ ಶೃತಿಯ ಏರಿಳಿತದಲ್ಲಷ್ಟೇ ದೋಷವಿರಬೇಕೆಂದಿಲ್ಲ. ಶೃತಿ ಮತ್ತು ಧ್ವನಿಯ ಗಡಸಿನಲ್ಲಿ (loudness) ವ್ಯತ್ಯಾಸ ಉಂಟಾಗಬಹುದು. ಅಂತೆಯೇ ಧ್ವನಿಯು ಮೂಗಿನಿಂದ ಹೊರಟ ಸ್ವರದಂತೆಯೇ ಕೇಳಬಹುದು. ಬಾಯಿಯ ಅಂಗಳಿನ ಮುಚ್ಚಳವು ಸೀಳು ಅಂಗುಳು, ಅಂಗುಳು ನಿಸ್ಸತ್ವತೆ ಇದ್ದಾಗ ಹುಟ್ಟಿನಿಂದ ಕಂಡುಬರುವ ಸೀಳು ತುಟಿ/ಅಂಗುಳು, ಅಥವಾ ನರಮಂಡಲದ ದುಃಸ್ಥಿತಿಯಿಂದ ಉಂಟಾಗುವ ಅಂಗುಳಿನ ನಿಃಶಕ್ತಿಯಿಂದಾಗಿ ಧ್ವನಿಯ ಶೃತಿಯಲ್ಲಿ ಏರಿಳಿತಗಳು ಉಂಟಾಗಬಹುದು ಅಥವಾ ಆಕಸ್ಮಿಕ ಅಪಘಾತದಿಂದುಂಟಾಗುವ ಪೆಟ್ಟಿನಿಂದಾಗಿ ಅಂಗುಳು ನಿಷ್ಕ್ರಿಯಗೊಂಡಾಗ ಮಾತಿನ ಸ್ವರವು ಮೂಗಿನಿಂದ ಬಂದಂತೆ ಕೇಳುತ್ತದೆ. ಸೂಕ್ತವಾದ ಶಸ್ತ್ರಕ್ರಿಯೆ, ಅಥವಾ ಬದಲಿ ಜೋಡಣೆ ಮತ್ತು ಮಾತಿನ ತರಬೇತಿ ಕಾರ್ಯಕ್ರಮದಿಂದ ಧ್ವನಿಯನ್ನು ಉತ್ತಮಗೊಳಿಸಲು ಸಾಧ್ಯವಿದೆ.

# ಅಭ್ಯಾಸ–4

1) ಮಾತು–ಭಾಷಾ ದೋಷಗಳನ್ನುಂಟುಮಾಡುವ ಯಾವುದಾದರೂ ನಾಲ್ಕು ಕಾರಣಗಳನ್ನು ಹೆಸರಿಸಿ.
2) ಮಾತು–ಭಾಷಾ ದೋಷಗಳ ಗುಣಲಕ್ಷಣಗಳು ಪ್ರತಿಯೊಂದಕ್ಕೂ ಪ್ರತ್ಯೇಕವಾಗಿರುತ್ತದೆ.
3) ಮಾತಿನ ದೋಷಗಳನ್ನು ಸಾಮಾನ್ಯವಾಗಿ ___ ___ ___ ಎಂದು ವಿಂಗಡಿಸಲಾಗಿದೆ.
4) ತೊದಲು ಮಾತಿನ ಮುಖ್ಯ ಗುಣಲಕ್ಷಣಗಳನ್ನು ಪಟ್ಟಿಮಾಡಿ.
5) ಎಲ್ಲಾ ರೀತಿಯ ತೊದಲೂ ಒಂದೇ ಕಾರಣದಿಂದ ಉಂಟಾಗುತ್ತದೆ. (ಸರಿ ತಪ್ಪು)
6) ತೊದಲು ಸಾಮಾನ್ಯವಾಗಿ ಹೆಣ್ಣು ಮಕ್ಕಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. (ಸರಿ ತಪ್ಪು)
7) ಧ್ವನಿಯ ಬೆಳವಣಿಗೆಯನ್ನು ಚಿತ್ರಿಸಿ.
8) ಧ್ವನಿಪೆಟ್ಟಿಗೆಯ ವಿವಿಧ ಭಾಗಗಳನ್ನು ಹೆಸರಿಸಿ.
9) ಮೂಗಿನಿಂದ ಹೊರಟ ಸ್ವರದಂತಿರಲು ಮೂಲ ಕಾರಣಗಳು ___ ___ ___ ___
10) ವೃತ್ತಿಪರ ಧ್ವನಿ ಉಪಯೋಗ ಮಾಡುವವರ ನಾಲ್ಕು ಗುಂಪುಗಳನ್ನು ಹೆಸರಿಸಿ.

# ಅಧ್ಯಾಯ - 5

# ಮಾತು-ಭಾಷೆಯ ದೋಷಗಳನ್ನು ಗುರುತಿಸುವ ಬಗೆ

**1) ಭಾಷೆಯ ದೋಷ ಎಂದು ಯಾವಾಗ ಕರೆಯುತ್ತಾರೆ?**

ಸಂವಹನಕ್ಕಾಗಿ ಭಾಷಾ ಸಂಕೇತಗಳನ್ನು ಸೂಕ್ತರೀತಿಯಲ್ಲಿ ಬಳಸದಿದ್ದಾಗ 'ಭಾಷಾದೋಷ' ಎಂದು ಪರಿಗಣಿಸುತ್ತೇವೆ.

**2) ಭಾಷೆಯ ದೋಷವನ್ನು ಎಷ್ಟು ಬಗೆಯಾಗಿ ವಿಂಗಡಿಸಬಹುದು ?**

ಭಾಷೆಯ ದೋಷವನ್ನು ಸಾಮಾನ್ಯವಾಗಿ ಮಕ್ಕಳಲ್ಲಿ ಕಂಡುಬರುವ ಭಾಷೆಯ ದೋಷ (child language disorder) ಮತ್ತು ವಯಸ್ಕರಲ್ಲಿ ಕಂಡುಬರುವ ಭಾಷೆಯ ದೋಷ (adult language disorder) ಎಂದು ವಿಂಗಡಿಸಲಾಗಿದೆ. ಅಷ್ಟೇ ಅಲ್ಲದೆ ಹುಟ್ಟಿನಿಂದಿರುವ ಭಾಷೆಯ ದೋಷಗಳು (congenital language disorder) ಮತ್ತು ಹುಟ್ಟಿದನಂತರ ಪಡೆದುಕೊಂಡಿರುವ ಭಾಷೆಯ ದೋಷಗಳು (acquired language disorder) ಎಂದೂ ಸಹ ವಿಂಗಡಿಸಲಾಗಿದೆ.

**3) ಮಕ್ಕಳಲ್ಲಿ ಕಂಡುಬರುವ ಭಾಷಾದೋಷಗಳಿಗೆ ಕಾರಣಗಳು ಯಾವುವು ?**

- ☐ ನಿಧಾನಗತಿಯ ಭಾಷಾ ಬೆಳವಣಿಗೆ
- ☐ ಬುದ್ಧಿಮಾಂದ್ಯತೆ
- ☐ ತಂತನತೆ
- ☐ ಶ್ರವಣದೋಷ
- ☐ ಅತಿ ಚಟುವಟಿಕೆ
- ☐ ಕಲಿಕಾ ನ್ಯೂನತೆ
- ☐ ಮಿದುಳಿನ ನಿಸ್ಸತ್ವತೆ
- ☐ ವಾಕ್‌ಸ್ತಂಭ
- ☐ ಅಪಸ್ಮಾರ



ಬುದ್ಧಿಮಾಂದ್ಯತೆಯುಳ್ಳ ಮಗು    ಕಿವುಡುತನವುಳ್ಳ ಮಗು

### 3) ಭಾಷಾಕೌಶಲ್ಯದ ಮೌಲ್ಯಮಾಪನ ಮಾಡುವುದು ಹೇಗೆ ?

ಭಾಷಾಕೌಶಲ್ಯದ ಮಾಪನವನ್ನು ಭಾಷಾಗ್ರಹಿಸುವಿಕೆ (language reception) ಮತ್ತು ಭಾಷಾ ಬಳಸುವಿಕೆ (language expression) ಎಂಬ ಎರಡು ಅಳತೆಗೋಲುಗಳ ಸಹಾಯದಿದ ಮಾಡಲಾಗುತ್ತದೆ.

### 4) ವಯಸ್ಕರಲ್ಲಿ ಕಂಡುಬರುವ ಭಾಷೆಯ ದೋಷಗಳು ಯಾವುವು ?

ವಯಸ್ಕರ ಭಾಷೆಯ ದೋಷಗಳ ಸ್ಥಿತಿಯಲ್ಲಿ ಸಾಮಾನ್ಯವಾಗಿ ಭಾಷೆಯನ್ನು ಗ್ರಹಿಸುವ ಶಕ್ತಿ ಮತ್ತು ಭಾಷೆಯನ್ನು ಬಳಸುವಿಕೆಯ ಶಕ್ತಿಯು ಕ್ಷೀಣವಾಗಿರುತ್ತದೆ. ಕೆಲವೊಂದು ಸ್ಥಿತಿಗಳಲ್ಲಿ ಮೇಲಿನ ಯಾವುದೇ ಒಂದು ಶಕ್ತಿಯು ಇನ್ನೊಂದಕ್ಕಿಂತ ಹೆಚ್ಚಾಗಿ ಕ್ಷೀಣಿಸಿರುವುದೂ ಸಹಜ (predominantly receptive/predominantly expressive)



ಭಾಷಾಸಾಮರ್ಥ್ಯ ಕ್ಷೀಣವಾಗಿರುವ ವಯಸ್ಕರು

### 5) ಭಾಷಾದೋಷಗಳ ಗುಣಲಕ್ಷಣವನ್ನು ತಿಳಿಯಲು ಸಾಮಾನ್ಯವಾಗಿ ಯಾವ ಅಂಶಗಳನ್ನು ಪರೀಕ್ಷಿಸಲಾಗುತ್ತದೆ?

ಭಾಷಾದೋಷಗಳ ಗುಣಲಕ್ಷಣಗಳನ್ನು ಅಳೆಯಲು ಸಾಮಾನ್ಯವಾಗಿ ಭಾಷೆಯ ಅವಿಭಾಜ್ಯ ಅಂಶಗಳಾದ ಸ್ವರಗಳು, ಪದಗಳು, ವಾಕ್ಯಗಳು, ಅರ್ಥಬದ್ಧವಾದ ಪದಜೋಡಣೆಗಳು ಮತ್ತು ಭಾಷಾ ಗ್ರಹಿಸುವಿಕೆ ಮತ್ತು ಬಳಸುವಿಕೆಯನ್ನು ಪರೀಕ್ಷಿಸಲಾಗುತ್ತದೆ. ಮಕ್ಕಳ ಭಾಷಾದೋಷಗಳಲ್ಲಿ ಮೇಲೆ ಹೇಳಿದ ಅಂಶಗಳಲ್ಲಿ ಏರುಪೇರಾಗುವ ಸಂಭವವಿದೆ.

### 6) ನಿಧಾನಗತಿಯ ಭಾಷಾ ಬೆಳವಣಿಗೆ

ಮಕ್ಕಳು ವರ್ಷ ತುಂಬುವುದರೊಳಗೆ ಸಾಮಾನ್ಯವಾಗಿ ಎರಡಕ್ಷರದ ಪದಗಳನ್ನು ಅರ್ಥಬದ್ಧವಾಗಿ ಬಳಸಲು ಪ್ರಾರಂಭಿಸುತ್ತಾರೆ. ನಿಧಾನಗತಿಯ ಭಾಷಾ ಬೆಳವಣಿಗೆಯುಳ್ಳ ಮಕ್ಕಳು ವರ್ಷ ತುಂಬುವುದರೊಳಗೆ ಮಾತನ್ನು ಮತ್ತು ಭಾಷೆಯನ್ನು ಅರ್ಥಮಾಡಿಕೊಳ್ಳಲು ಪ್ರಾರಂಭಿಸಿದರೂ ಸಹ ಭಾಷಾ ಬಳಸುವಿಕೆಯಲ್ಲಿ ಹಿಂದೆ ಬೀಳುತ್ತಾರೆ. ಹಲವಾರು ಬಾರಿ ಮಗುವಿನ ಸಂಜ್ಞಾನಾತ್ಮಕ ಶಕ್ತಿ, ಶ್ರವಣಶಕ್ತಿ ಮನೆಯಲ್ಲಿ ಉತ್ತೇಜಕವಾದ ವಾತಾವರಣವಿದ್ದರೂ ಸಹ ನಿಧಾನಗತಿಯ ಭಾಷಾ ಬೆಳವಣಿಗೆ ಕಂಡುಬರುತ್ತದೆ. ಅಂತಹ ಮಕ್ಕಳು ಮುಂದಿನ ಭಾಷಾ ಬೆಳವಣಿಗೆಯ ಅಪಾಯದ ಅಂಚಿನಲ್ಲಿರುವವರು (at risk) ಎಂದು ಪರಿಗಣಿಸಬಹುದು. ಅದರಲ್ಲೂ 'ಭಾಷಾಗ್ರಹಿಸುವಿಕೆ' ಮತ್ತು 'ಭಾಷಾ ಬಳಸುವಿಕೆ'ಯನ್ನು ಮೌಲ್ಯಮಾಡಿದಾಗ ಎರಡರ ಅಂತರ ಸುಮಾರು ಆರು ತಿಂಗಳು ಅಥವಾ ಅದರ ಮೇಲ್ಪಟ್ಟು ಇದ್ದರೆ ಅಂತಹ ಮಕ್ಕಳು 'ವಿಶಿಷ್ಟ ಭಾಷಾ ದುಃಸ್ಥಿತಿ'ಗೆ (specific language impairment) ಒಳಗಾಗುವ ಸಂಭವ ಹೆಚ್ಚು.

ಅಂತಹವರನ್ನು ಕೂಲಂಕಷವಾಗಿ ಪರೀಕ್ಷಿಸಿ ತಕ್ಷಣ ಮಾತಿನ ತರಬೇತಿಯನ್ನು ನೀಡುವುದು ಸೂಕ್ತ.




ನಿಮ್ಮ ಮಗು ಭಾಷಾಗ್ರಹಿಕೆಯಲ್ಲಿ ಮುಂದಿದ್ದರೂ, ಭಾಷಾಬಳಕೆಯಲ್ಲಿ ಹಿಂದುಳಿದಿದೆಯೆಂದು ಸಂದೇಹವೆ?

## 7) ಯಾವ ಸ್ಥಿತಿಗಳಲ್ಲಿ ನಿಧಾನಗತಿಯ ಭಾಷಾ ಬೆಳವಣಿಗೆ ಉಂಟಾಗುವ ಸಾಧ್ಯತೆ ಇದೆ?

ಭಾಷಾ ಬೆಳವಣಿಗೆಗೆ ಸಂಜ್ಞಾನಾತ್ಮಕ ಶಕ್ತಿ ಹಾಗೂ ಬೌದ್ಧಿಕ ಶಕ್ತಿ ಬಹಳ ಮುಖ್ಯ. ಕಾರಣಾಂತರದಿಂದ ಬುದ್ಧಿಮಾಂದ್ಯತೆ ಉಂಟಾದಾಗ ಭಾಷಾ ಬೆಳವಣಿಗೆ ಬುದ್ಧಿಮಟ್ಟಕ್ಕನುಸಾರವಾಗಿ ಇರುತ್ತದೆ. ಆದ್ದರಿಂದ ಬುದ್ಧಿಮಾಂದ್ಯತೆ ಹೊಂದಿರುವ ಮಕ್ಕಳ ಆರೈಕೆಯನ್ನು ಜಾಗ್ರತೆಯಿಂದ ಮಾಡಬೇಕು. ಅವರಲ್ಲಿನ ಭಾಷಾ ಬೆಳವಣಿಗೆಯನ್ನು ಹೆಚ್ಚಿಸಲು ಸರಿಯಾದ ನಿರ್ವಹಣೆ ಮುಖ್ಯವಾಗುತ್ತದೆ.

## 8) ಬೌದ್ಧಿಕ ಶಕ್ತಿ ಕುಂಠಿತವಾದಾಗ ಉಂಟಾಗುವ ಸ್ಥಿತಿ ಯಾವುದು ?

ಅತಿ ಕೆಳಮಟ್ಟದ ಬೌದ್ಧಿಕ ಶಕ್ತಿ (IQ) ಇರುವ ಮಕ್ಕಳು ಕೇವಲ ಪದಗಳನ್ನಷ್ಟೇ ಬಳಸುವುದುಂಟು. ಅದರಲ್ಲೂ ಅವುಗಳನ್ನು ಅಸ್ಪಷ್ಟವಾಗಿ ಉಚ್ಛರಿಸುತ್ತಾರೆ ಮತ್ತು ಭಾಷಾ ಗ್ರಹಿಸುವಿಕೆಯೂ ಕೂಡ ಅತಿ ಕೆಳಮಟ್ಟದಲ್ಲಿರುತ್ತದೆ. ಸ್ವಲ್ಪ 10 ಮೆಟ್ಟಿಲು ಅಂದ್ರೆ ಮೆಟ್ಟಲೇ ಹತ್ತುತ್ತಿದ್ದಾನಲ್ಲ! ಧಿಕ ಶಕ್ತಿ ಇರುವ ಮಕ್ಕಳು ಭಾಷೆಯ ಸ್ವರಗಳನ್ನು ಸರಿಯಾಗಿ ಉಚ್ಛರಿಸಿದರೂ ಸಹ ವಾಕ್ಯರಚನೆಯಲ್ಲಿ, ಸಂದರ್ಭಕ್ಕೆ ತಕ್ಕಂತೆ ಭಾಷೆ ಬಳಸುವುದು ಮತ್ತು ಭಾಷೆಯ ಕ್ಲಿಷ್ಟಾರ್ಥಗಳನ್ನು ಗ್ರಹಿಸುವುದರಲ್ಲಿ ಹಿಂದುಳಿಯುತ್ತಾರೆ. ಬುದ್ಧಿಮಾಂದ್ಯತೆಯುಳ್ಳ ಮಕ್ಕಳು ಭಾಷಾಚಟುವಟಿಕೆಯಲ್ಲಷ್ಟೆ ಅಲ್ಲದೆ ಸಾಮಾಜಿಕ ಚಟುವಟಿಕೆಗಳಲ್ಲಿ ಮತ್ತು ತಮ್ಮ ಸ್ವಂತ ಕಾರ್ಯಗಳನ್ನು ಮಾಡಿಕೊಳ್ಳುವುದರಲ್ಲಿ ಕೂಡ ಅಸಮರ್ಥತೆ ತೋರಿಸುತ್ತಾರೆ.



ಬುದ್ಧಿಮಾಂದ್ಯತೆಯುಳ್ಳ ಮಗು

## 9) ತಂತನತೆ (Autism) ಎಂದರೇನು ?

'ತಂತನತೆ' ಎಂದರೆ ಒಂದು ಮಗು ಅಥವಾ ವ್ಯಕ್ತಿ ತನ್ನ ಸುತ್ತಲಿನ ಆಗುಹೋಗುಗಳ ಪರಿವೆಯೇ ಇಲ್ಲದೆ ತನ್ನ ಪ್ರಪಂಚದಲ್ಲೇ ವಿಹರಿಸುವ ಒಂದು ಸ್ಥಿತಿ.

## 10) ತಂತನತೆ ಇರುವ ಮಕ್ಕಳಲ್ಲಿ ಭಾಷಾ ಬೆಳವಣಿಗೆ ಹೇಗಿರುತ್ತದೆ ?

ತಂತನತೆ ಎಂಬುದು ಬಹಳ ಗಂಭೀರ ಸ್ಥಿತಿ. ತಂತನತೆಯಿರುವ ಮಕ್ಕಳು ಸರಿಸುಮಾರು $1^1/_2$–2 ವರ್ಷದವರೆಗೂ ಎಲ್ಲಾ ಮಕ್ಕಳಂತೆಯೇ ಬೆಳೆಯುತ್ತಾರೆ. ತದನಂತರ ಭಾಷಾ ಬೆಳವಣಿಗೆಯಲ್ಲಿ ಹಿಂದುಳಿಯುವ ಸೂಚನೆಯನ್ನು ತೋರುತ್ತಾರೆ. ಸಾಮಾನ್ಯವಾಗಿ ಇಂತಹ ಮಕ್ಕಳು ತಮ್ಮದೇ ಆದ ಪ್ರಪಂಚದಲ್ಲಿ ಇರುತ್ತಾರೆ ಎಂಬ ನಂಬಿಕೆ. ತಮ್ಮ ವಯಸ್ಸಿನ ಮಕ್ಕಳೊಂದಿಗೆ ಆಡುವುದಾಗಲೀ, ಪೋಷಕರು ಮತ್ತು ಒಡಹುಟ್ಟಿದವರೊಂದಿಗೆ ಒಡನಾಡುವುದಾಗಲಿ ಮಾಡುವುದಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ತಮ್ಮ ಬೇಕು–ಬೇಡಗಳನ್ನು ತಿಳಿಸುವುದಕ್ಕೂ ಸಹ ಅಬಲರು. ಇಂತಹ ಎಲ್ಲಾ ಮಕ್ಕಳ ಭಾಷಾಕೌಶಲ್ಯದ ಎಲ್ಲಾ ಅಂಶಗಳಲ್ಲಿ ಒಂದೇ ರೀತಿಯ ದೋಷವಿರಬೇಕೆಂಬ



ನಿಯಮವೇನಿಲ್ಲ. ಭಾಷೆಯ ಮೌಲ್ಯಮಾಪನ ಮಾಡಿದಾಗ ಅತಿಯಾದ ಏರು–ಪೇರಿನಿಂದ (ideosyncratic) ಕೂಡಿದ ಭಾಷೆ ಎಂದು ತಿಳಿದುಬರುತ್ತದೆ. ತಂತನತೆ ಇರುವ ಮಕ್ಕಳು ಆಡಿದ ಮಾತನ್ನೇ ಪುನರಾವರ್ತನೆ ಮಾಡುವುದು (repetition/echolatia) ಎಂದೋ ಆಡಿದ ಮತ್ತು ಕೇಳಿದ ಪದಗಳು ವಾಕ್ಯಗಳನ್ನು ಪುನರಾವರ್ತನೆಮಾಡುವುದು, ಕೇಳಿದರೂ ಕೇಳಿಸದಂತೆ, ನೋಡಿದರೂ ನೋಡದಂತೆ ವರ್ತಿಸುವುದು, ಅತಿರೇಕವಾಗಿ ಸ್ವಲ್ಪ ಶಬ್ದಕ್ಕೂ, ಬೆಳಕಿಗೂ ಸ್ಪಂದಿಸುವುದು ಇತ್ಯಾದಿ ವೈಪರೀತ್ಯದ ವರ್ತನೆಯನ್ನು ತೋರುತ್ತಾರೆ. ತಂತನ ಪ್ರಕಟಿಸುವ ಮಕ್ಕಳಿಗೆ ಸಾಮಾನ್ಯವಾಗಿ ಯಾವುದೇ ಒಂದು ರೀತಿಯ ತರಬೇತಿ ಮತ್ತು ಚಿಕಿತ್ಸೆಯಿಂದ ಸರಿಪಡಿಸಲು ಅಸಾಧ್ಯ. ಒಂದು ತಜ್ಞರ [illegible]ರುವ ಮಕ್ಕಳನ್ನು ಕಾಲಕಾಲಕ್ಕೆ ಪರೀಕ್ಷಿಸಿ ಸೂಕ್ತ ಮಾರ್ಗದರ್ಶನ ನೀಡುವುದರಿಂದ ಅಂತಹ ಮಕ್ಕಳು ಸಮಾಜದಲ್ಲಿ ಒಂದು ನಿರ್ದಿಷ್ಟ ಮಟ್ಟದಲ್ಲಿ ಬಾಳುವ ಕಲೆಯನ್ನು ಬೆಳೆಸಬಹುದು.

### 11) ಶ್ರವಣದೋಷ ಎಂದರೇನು ?

ಹೇಳಿದ್ದನ್ನು ಕೇಳಿಸಿಕೊಳ್ಳಲಾಗದ ಮಗುವಿನ ಅಥವಾ ವಯಸ್ಕರ ಸ್ಥಿತಿಯನ್ನು ಶ್ರವಣದೋಷವೆಂದು ಕರೆಯಬಹುದು.

### 12) ಶ್ರವಣದೋಷದಿಂದ ಉಂಟಾಗುವ ನಿಧಾನಗತಿಯ ಮಾತು ಮತ್ತು ಭಾಷೆಯ ದೋಷಗಳು ಯಾವುವು?

ಮಕ್ಕಳಲ್ಲಿ ಶ್ರವಣದೋಷವು ಹುಟ್ಟಿನಿಂದ ಬರಬಹುದು ಅಥವಾ ನಂತರ ಇನ್ನಾವುದೋ ಕಾರಣಾಂತರಗಳಿಂದ ಕಾಣಿಸಿಕೊಳ್ಳಬಹುದು. ಶ್ರವಣ ದೋಷವು ವಿವಿಧ ಪ್ರಮಾಣದಲ್ಲಿಯೂ ಇರಬಹುದು. ಸ್ವಲ್ಪ ಪ್ರಮಾಣದಲ್ಲಿದ್ದಾಗ ಹೆಚ್ಚಾಗಿ ಮಾತು ಮತ್ತು ಭಾಷೆಯ ದೋಷ ಉಂಟಾಗದೇ ಇರಬಹುದು. ಶ್ರವಣ ದೋಷ ಹೆಚ್ಚಿನ ಪ್ರಮಾಣದಲ್ಲಿದ್ದಾಗ ಭಾಷಾ ಬೆಳವಣಿಗೆ ನಿಧಾನಗತಿಯಿಂದ ಕೂಡಿರುತ್ತದೆ ಮತ್ತು ಭಾಷಾ ವೈಕಲ್ಯತೆಗಳೂ ಸಹ ಕಾಣಿಸಿಕೊಳ್ಳುವುದು.



ಶ್ರವಣದೋಷವುಳ್ಳ ಮಗು

ಹುಟ್ಟಿನಿಂದ ಶ್ರವಣದೋಷವುಳ್ಳ ಮಕ್ಕಳು (Pre-lingual deaf) ಪದಭಂಡಾರದ ಬೆಳವಣಿಗೆಯಲ್ಲಿ ಹಿಂದುಳಿದಿರುತ್ತಾರೆ ಎಂದು ಸ್ಪಷ್ಟವಾಗಿದೆ. ಅಷ್ಟೇ ಅಲ್ಲದೆ, ಶ್ರವಣಶಕ್ತಿ ಕ್ಷೀಣಿಸಿರುವುದರಿಂದ ಪದಗಳ ಸ್ಪಷ್ಟ ಉಚ್ಚಾರಣೆ, ಧ್ವನಿ ಪ್ರಯೋಗ ಮತ್ತು ನಿರರ್ಗಳವಾದ ಮಾತಿನ ಧಾಟಿ ಅವರ ಮಾತಿನಲ್ಲಿ ಇರುವುದಿಲ್ಲ. ಭಾಷಾ ಪ್ರಯೋಗದಲ್ಲೂ ಸಹ ವಾಕ್ಯ ರಚನೆ ಕುಂಠಿತವಾಗಿರುತ್ತದೆ. ಸಂದರ್ಭಕ್ಕೆ ಬೇಕಾದ ಪದಗಳನ್ನು ಮತ್ತು ವಾಕ್ಯಗಳನ್ನು ರಚಿಸುವುದರಲ್ಲಿ, ಕ್ಲಿಷ್ಟವಾದ ವಾಕ್ಯ ರಚನೆಗಳನ್ನು ಮಾಡುವುದರಲ್ಲಿ ತೊಂದರೆಗೀಡಾಗುತ್ತಾರೆ. ಅಷ್ಟೇ ಅಲ್ಲದೆ ತಮ್ಮ ಧ್ವನಿಯನ್ನು ತಾವೇ ಕೇಳಿ ಸೂಕ್ತ ರೀತಿಯಲ್ಲಿ ವಾಕ್ಯಗಳಿಗೆ/ಅರ್ಥಕ್ಕೆ/ ಸಂದರ್ಭಕ್ಕೆ ತಕ್ಕಂತೆ ಹೊಂದಿಸಿಕೊಳ್ಳಲು ಅಸಮರ್ಥರಾಗಿರುತ್ತಾರೆ. ಇದರಿಂದ ಇವರು ಧ್ವನಿಯ ಏರಿಳಿತವನ್ನು ಮಾಡಿ ಮಾತನಾಡಲು (intonation) ಕಷ್ಟಪಡುತ್ತಾರೆ. ಮಾತು ಮತ್ತು ಭಾಷೆ ಕಲಿತ ನಂತರ ಉಂಟಾಗುವ ಶ್ರವಣದೋಷವು (post-lingual deaf) ಸಾಮಾನ್ಯವಾಗಿ ಭಾಷಾದೋಷವನ್ನು ಉಂಟುಮಾಡದೆ ಮಾತಿನ ದೋಷಗಳನ್ನಷ್ಟೇ ಉಂಟುಮಾಡುತ್ತದೆ ಎಂದೂ ಸಹ ಸ್ಪಷ್ಟವಾಗಿದೆ.

### 13) ಅತಿಚಟುವಟಿಕೆ ಸ್ಥಿತಿ ಎಂದರೇನು ?

ಸಾಮಾನ್ಯ ಮಕ್ಕಳಿಗಿಂತ ಅತಿ ಚಟುವಟಿಕೆಯಿಂದ ಕೂಡಿರುವ ಮಕ್ಕಳು ಗಮನ ಕೇಂದ್ರೀಕರಣದಲ್ಲಿಯಾಗಲೀ ಅಥವಾ ಒಂದು ಚಟುವಟಿಕೆಯಿಂದ ಮತ್ತೊಂದು ಚಟುವಟಿಕೆಗೆ ಶೀಘ್ರವಾಗಿ ಬದಲಾವಣೆ ಮಾಡಿಕೊಳ್ಳುವುದಾಗಲೀ ಹಾಗೂ ಭಾಷಾ ಮತ್ತು ವಿದ್ಯಾಭ್ಯಾಸ ಕಲಿಕೆಯಲ್ಲಿ ಆಗಲಿ ಹಿಂದುಳಿದಿರುತ್ತಾರೆ. ಇಂತಹ ಸ್ಥಿತಿಯಲ್ಲಿರುವ ಮಕ್ಕಳಿಗೆ ವಿಶೇಷ ತರಬೇತಿ ಕೊಡುವ ವ್ಯವಸ್ಥೆ ಮಾಡಬೇಕು.

### 14) ಅತಿ ಚಟುವಟಿಕೆ ಸ್ಥಿತಿಯಿಂದ ಉಂಟಾಗುವ ಭಾಷಾದೋಷಗಳು ಯಾವುವು ?

ಅತಿ ಚಟುವಟಿಕೆಯು (hyperactivity) ಮಕ್ಕಳು ಸಾಮಾನ್ಯವಾಗಿ ಒಂದು ಕೆಲಸದಲ್ಲಿ ತಮ್ಮ ಗಮನವನ್ನು ಕೇಂದ್ರೀಕರಿಸುವುದರಲ್ಲಿ ಅಸಮರ್ಥರಾಗಿರುತ್ತಾರೆ. ಇಂತಹ ಮಕ್ಕಳು ಕಾರಣವಿಲ್ಲದೆ ಗಮನವನ್ನು ಬೇರೆಡೆ ಹರಿಸುತ್ತಾರೆ ಇದರಿಂದ ಇವರು ಮಾನಸಿಕ ಮತ್ತು ಶೈಕ್ಷಣಿಕ ಬೆಳವಣಿಗೆಯಲ್ಲೂ ಹಿಂದುಳಿಯುತ್ತಾರೆ. ಕಲಿಕೆಗೆ ಪೂರಕವಾದ ಗಮನಶಕ್ತಿ, ಏಕಾಗ್ರತೆ ಮತ್ತು ಆಸಕ್ತಿ ತೋರದೆ ಇರುವುದರಿಂದ ಇವರು ಶಾಲೆಯಲ್ಲೂ ಹಿಂದೆ ಬೀಳುವ ಸಂಭವ ಉಂಟು.



ಅತಿ ಚಟುವಟಿಕೆಯುಳ್ಳ ಮಗು

ಅತಿ ಚಟುವಟಿಕೆಯುಳ್ಳ ಮಕ್ಕಳು ಭಾಷಾಗ್ರಹಿಕೆಯಲ್ಲೂ ಹಿಂದುಳಿಯುತ್ತಾರೆ. ಅವರಿಗೆ ಭಾಷೆಯನ್ನು ಗಮನವಿಟ್ಟು ಕೇಳಲು ಏಕಾಗ್ರತೆ ಇರುವುದಿಲ್ಲ. ಮಕ್ಕಳ ಭಾಷಾಗ್ರಹಿಕೆ ಹಿಂದಾದಾಗ ಭಾಷೆಯ

ಉಪಯೋಗಿಸುವಿಕೆಯಲ್ಲೂ ಅವರು ಹಿಂದುಳಿಯುವುದು ಸವ ಇಂತಹ ಮಕ್ಕಳು ಪದಗಳ ಉಚ್ಚಾರಣೆಯನ್ನು ಸ್ಪಷ್ಟವಾಗಿ ಮಾಡಿದರೂ ಸಹ ಭಾಷೆಯ ಪ್ರಯೋಗ ಸೂಕ್ತ ರೀತಿಯಲ್ಲಿ ಮಾಡದಿರುವುದರಿಂದ ನಿಧಾನಗತಿಯ ಭಾಷಾಬೆಳವಣಿಗೆ ಇವರಲ್ಲಿ ಕಂಡುಬರುತ್ತದೆ. ಅಷ್ಟೇ ಅಲ್ಲದೆ ಇವರ ಸಾಮಾಜಿಕ, ಲೌಕಿಕ, ಶೈಕ್ಷಣಿಕ ಬೆಳವಣಿಗೆಯೂ ಅದಕ್ಕನುಗುಣವಾಗಿ ಹಿಂದುಳಿಯುವ ಸಾಧ್ಯತೆ ಇದೆ.

### 15) ಕಲಿಕಾ ನ್ಯೂನತೆ ಎಂದರೇನು ?

ನೋಡಲು ಎಲ್ಲಾ ರೀತಿಯಲ್ಲೂ (ದೈಹಿಕ, ಮಾನಸಿಕ, ಬೌದ್ಧಿಕ) ಬೆಳವಣಿಗೆ ಹೊಂದಿರುವ ಮಗು ಪಾಠ ಓದಲು, ಬರೆಯಲು, ಲೆಕ್ಕ ಮಾಡಲು ಶಾಲೆಯಲ್ಲಿ ಹಿಂದೆ ಉಳಿದಾಗ, ಅಂತಹ ಮಕ್ಕಳನ್ನು 'ಕಲಿಕಾ ನ್ಯೂನತೆಯುಳ್ಳ ಮಕ್ಕಳು' ಎಂದು ಕರೆಯುತ್ತೇವೆ.




ಲೆಕ್ಕಮಾಡಲು ತಿಳಿಯದೆ ನಿಂತಿರುವ ಮಗು

### 16) ಕಲಿಕಾನ್ಯೂನತೆಯ ಮಕ್ಕಳ ಭಾಷಾ ಬೆಳವಣಿಗೆ ಹೇಗಿರುತ್ತದೆ?

ಓದುವಿಕೆಯು ಭಾಷಾ ಸಂಪತ್ತಿನಿಂದ ಪಡೆಯಬಲ್ಲ ಒಂದು ಕಲೆ. ಕಾಗದದ ಮೇಲೆ ಮುದ್ರಿಸಿದ ಅಕ್ಷರಗಳನ್ನು ಶಬ್ದಗಳಾಗಿ ಪರಿವರ್ತಿಸಿ, ಅರ್ಥಮಾಡಿಕೊಳ್ಳುವ ಕಲೆಯನ್ನು ಓದುವಿಕೆ ಎಂದು ಕರೆಯಬಹುದು. ಇಂತಹ ಕಲೆ ಎಲ್ಲರಿಗೂ ಸುಲಭಸಾಧ್ಯವಲ್ಲ. ಶಾಲೆಯಲ್ಲಿ ಕಲಿಯುತ್ತಿರುವ ಮಕ್ಕಳನ್ನು ಗಮನಿಸಿದರೆ, ಎಲ್ಲಾ ಮಕ್ಕಳೂ ಈ ಕಲೆಯನ್ನು ಪಡೆಯುತ್ತಾರೆ ಎಂದು ಹೇಳಲು ಕಷ್ಟ. ಒಳ್ಳೆಯ ಬುದ್ಧಿಶಕ್ತಿ ಹಾಗೂ ಕಲಿಸುವ ಮಾಧ್ಯಮವಿದ್ದರೂ ಸಹ ಕೆಲ ಮಕ್ಕಳಿಗೆ ಓದುವಿಕೆಯ ಕಲೆಯನ್ನು ಸ್ವತಃ ಪಡೆಯುವುದು ಕಷ್ಟ ಎನಿಸುವುದು. ಇಂತಹ ಮಕ್ಕಳಿಗೆ ಕಲಿಕಾ ನ್ಯೂನತೆ ಇರುವ ಸಾಧ್ಯತೆಯಿದೆ.

ಸಾಕಷ್ಟು ಬುದ್ಧಿಶಕ್ತಿಯಿದ್ದು ಅನುಕೂಲಕರವಾದ ಸಾಮಾಜಿಕ, ಆರ್ಥಿಕ ಪರಿಸ್ಥಿತಿಯಿದ್ದು, ಪಾಠ-ಪ್ರವಚನಗಳನ್ನೆಲ್ಲಾ ಸರಿಯಾದ ರೀತಿಯಲ್ಲಿ ನಡೆಸಿದ್ದರೂ ಸಹ ಯಾವ ಮಗು ಓದುವ ಶಕ್ತಿಯನ್ನು ಪಡೆಯುವುದಿಲ್ಲವೋ ಅಂತಹ ಮಗುವನ್ನು ಓದುವಿಕೆಯ ತೊಂದರೆ ಇರುವ ಮಗು ಎಂದು ಕರೆಯುತ್ತಾರೆ.

**17) ಕಲಿಕಾ ನ್ಯೂನತೆಗೆ ಇರುವ ಕಾರಣಗಳು ಯಾವುವು ?**

ಈ ತೊಂದರೆ ಯಾವುದೇ ಒಂದು ಕಾರಣದಿಂದ ಉಂಟಾಗುವ ಸ್ಥಿತಿಯಲ್ಲ. ವಿವಿಧ ಕಾರಣಗಳು ಈ ಸ್ಥಿತಿಯನ್ನು ಉಂಟುಮಾಡುತ್ತವೆ ಎಂದು ಕಂಡುಹಿಡಿಯಲಾಗಿದೆ.

**i. ಶಾರೀರಿಕ ಕಾರಣಗಳು**

ಕಲಿಕಾ ನ್ಯೂನತೆ ಇರುವ ಮಗುವಿಗೆ ಈ ಕೆಳಕಂಡ ದೋಷಗಳಿರಬಹುದು:

(ಅ) ಸಾಮಾನ್ಯ ಜನರಂತೆ ಮೆದುಳಿನ ಯಾವುದೇ ಒಂದು ಪಾರ್ಶ್ವದ ಮೇಲುಗೈ ಇಲ್ಲದೆ, ಎರಡು ಪಾರ್ಶ್ವಗಳೂ ಸಮಾನವಾಗಿ ವರ್ತಿಸಬಹುದು.

(ಆ) ಪರೀಕ್ಷೆಗೆ ಒಳಪಡಿಸಲಾಗದಂಥ ಮೆದುಳಿನ ಅತಿ ಸೂಕ್ಷ್ಮ ಕ್ರಿಯೆಗಳ ದೋಷಗಳಿರಬಹುದು,

(ಇ) ಇಂದ್ರಿಯ ಗ್ರಹಣ ಶಕ್ತಿಯಲ್ಲಿ ತೊಂದರೆಯಿರಬಹುದು.

**ii. ಪರಿಸರದ ಕಾರಣಗಳು**

(ಅ) ಕೆಳಮಟ್ಟದ ಸಾಮಾಜಿಕ – ಆರ್ಥಿಕ ಸ್ಥಿತಿಗಳು

(ಆ) ತಂದೆತಾಯಿ ಹಾಗೂ ಮಕ್ಕಳ ಸಂಬಂಧದಲ್ಲಿರಬಹುದಾದ ಸಾಮರಸ್ಯದ ತೊಂದರೆಗಳು

(ಇ) ಸಮಾಜದಲ್ಲಿರುವ ಭಾಷಾ ವೈವಿಧ್ಯತೆಗಳು, ಕಲಿಕೆಯ ತೊಂದರೆಯಾಗಿ ಹೆಚ್ಚಿಸಬಲ್ಲದು.

**iii. ಮಾನಸಿಕ ಕಾರಣಗಳು**

ಮನಸ್ಸಿನ ಉದ್ವೇಗ, ಉದ್ರೇಕ ಹಾಗೂ ಇತರ ಮನೋಭಾವನೆಗಳು ಕಲಿಕೆಯಲ್ಲಿ ತೊಂದರೆಯನ್ನು ಉಂಟುಮಾಡಬಲ್ಲದು.

**iv. ಶೈಕ್ಷಣಿಕ ಕಾರಣಗಳು**

(ಅ) ಉಪಾಧ್ಯಾಯ ಮತ್ತು ವಿದ್ಯಾರ್ಥಿಯಲ್ಲಿರಬಹುದಾದ ಸಾಮರಸ್ಯತೆಯ ದೋಷಗಳು

(ಆ) ಉಪಾಧ್ಯಾಯರು ಕೊಡಬಹುದಾದ ಶಿಕ್ಷಣ ತರಬೇತಿಯ ತೀವ್ರತೆ

(ಇ) ಉಪಾಧ್ಯಾಯರು ಅಳವಡಿಸಿಕೊಳ್ಳುವ ಶೈಕ್ಷಣಿಕ ರೀತಿನೀತಿಗಳು, ಮಗುವಿನ ಓದುವಿಕೆಯ ಶಕ್ತಿಯ ಮೇಲೆ ಪರಿಣಾಮ ಬೀರುತ್ತವೆ.

**18) ಕಲಿಕಾ ನ್ಯೂನತೆ ಇರುವ ಮಗುವನ್ನು ಹೇಗೆ ಗುರುತಿಸಬಹುದು?**

a) ಒಂದೊಂದೇ ಅಕ್ಷರ ಅಥವಾ ಪದವನ್ನು ಬಿಡಿಸಿ, ಬಿಡಿಸಿ, ಬಲು ನಿಧಾನವಾಗಿ ಓದುವ ರೀತಿ
b) ಅಕ್ಷರ ಮತ್ತು ಪದಗಳನ್ನು ದಿಕ್ಕುತಪ್ಪಿ ಓದುವುದು ಉದಾ: 'ತಣ್ಣೆ : ತಟ್ಟೆ', 'ಹಣ : ಹಟ'
c) ಒಂದು ಪದದ ಅಕ್ಷರಗಳ ಜೋಡಣೆಯನ್ನು ಓದುವಾಗ ಹಿಂದೆ ಮುಂದಾಗಿಸುವುದು ಉದಾ: ಹುಗುಡ : ಹುಡುಗ
d) ಒಂದೇ ರೀತಿ ಕಂಡುಬರುವ ಪದಗಳಲ್ಲಿ ಗೊಂದಲ ಉದಾ: 'ಸಹಾಯ : ನಹಾಯ'
e) ಓದುವಾಗ ಅಕ್ಷರಗಳ ಕೆಲಭಾಗಗಳ ಕಡೆಗೆ ಗಮನ ಕೊಡದೆ ಬಿಟ್ಟುಬಿಡುವುದು ಉದಾ: 'ತಿಡಿ : ತಿಂಡಿ'
f) ಪದೇ ಪದೇ ಕೆಲ ಪದಗಳು ಹಾಗೂ ಪದ ಸಮೂಹಗಳನ್ನು ಊಹಿಸಿ ಓದುವುದು.
g) ಮಾತಿನಲ್ಲೂ ಸಹ ಉಚ್ಚಾರಣಾ ದೋಷ, ತೊದಲುವುದು ಸಾಮಾನ್ಯ
h) ಕೆಲ ಭಾವಗಳನ್ನು ತಿರುಗು-ಮುರುಗು ಮಾಡುವ ಸಂಭವ ಹೆಚ್ಚು (ಎಡ-ಬಲ, ಹಿಂದೆ-ಮುಂದೆ,

ನೆನ್ನೆ-ನಾಳೆ)

i) ಮಾತನಾಡುವಾಗ - ಎರಡು ಪದಗಳ ಮೊದಲನೇ ಅಕ್ಷರಗಳನ್ನು ಅದಲು-ಬದಲು ಮಾಡುವ ಸಂಭವ ಉಂಟು

j) ಬರವಣಿಗೆಯಲ್ಲಿ ತೊಂದರೆ ಇರುವುದು

k) ಕಲಿಕಾ ನ್ಯೂನತೆ ಇರುವ ಮಗು ಸಾಮಾನ್ಯವಾಗಿ ಭಾಷಾ ಜ್ಞಾನದಲ್ಲಿ ತನ್ನ ವಯಸ್ಸಿನವರಿಗಿಂತ ಹಿಂದುಳಿದಿರುತ್ತದೆ

**19) ಕಲಿಕಾ ನ್ಯೂನತೆ ಇರುವಂತಹ ಮಗುವನ್ನು ಚಿಕ್ಕವಯಸ್ಸಿನಲ್ಲೆ ಕಂಡು ಹಿಡಿಯುವುದರಿಂದ ಆಗುವ ಅನುಕೂಲಗಳೇನು?**

ಕಲಿಕಾ ನ್ಯೂನತೆ ಇರುವ ಮಗುವನ್ನು ಶಿಶುವಿಹಾರ ಮಟ್ಟದಲ್ಲೇ ಕಂಡುಹಿಡಿಯುವುದರಿಂದ ಓದುವ ಕಲೆಗೆ ಬೇಕಾಗಬಹುದಾದ ತರಬೇತಿಯನ್ನು ಚಿಕ್ಕವಯಸ್ಸಿನಲ್ಲೇ ಕೊಡಬಹುದು. ಇದರಿಂದ ನಂತರದ ಶೈಕ್ಷಣಿಕ ಒತ್ತಡಗಳಿಗೆ ಮಗು ಹೊಂದಿಕೊಳ್ಳಲು ಸುಲಭವಾಗುತ್ತದೆ. ಕಲಿಕಾ ನ್ಯೂನತೆ ಇರುವ ಮಕ್ಕಳನ್ನು ಚಿಕ್ಕಂದಿನಲ್ಲಿ ಕಂಡುಹಿಡಿಯದಿದ್ದರೆ:

ಅ) ಅಂತಹ ಮಕ್ಕಳನ್ನು ನಡವಳಿಕೆಯ ದೋಷವಿರುವ ಮಕ್ಕಳು ಎಂದು ತಪ್ಪಾಗಿ ಗ್ರಹಿಸಿ ನಡವಳಿಕೆಯನ್ನು ತಿದ್ದಲು ವ್ಯರ್ಥವಾದ ಪ್ರಯತ್ನಗಳು ನಡೆಯಬಹುದು.

ಆ) ಅಂತಹ ಮಗು ತನ್ನ ಬುದ್ಧಿಶಕ್ತಿಗೆ ಅನುಗುಣವಾಗಿ ಓದುವ ಕಲೆಯನ್ನು ಬೆಳೆಸಿಕೊಳ್ಳಲಾಗದೆ ಶಾಲೆಯ ಬಗ್ಗೆಯೇ ತೀವ್ರವಾದ ಜಿಗುಪ್ಸೆ ಬೆಳೆಸಿಕೊಳ್ಳಬಹುದು.

ಇ) ಓದುವ ಕಲೆಯನ್ನು ಚಿಕ್ಕಂದಿನಲ್ಲಿ ಅಳವಡಿಸದಿದ್ದರೆ ದೊಡ್ಡವರಾದ ಮೇಲೆ ಕಲಿಯಲು ಹೆಚ್ಚು ಸಮಯ ಬೇಕಾಗಬಹುದು.

ಈ) ಇಂತಹ ಮಕ್ಕಳಿಗೆ ಸರಿಯಾದ ರೀತಿಯಲ್ಲಿ ತರಬೇತಿಯನ್ನು ಕೊಡದಿದ್ದರೆ ಅವರು ಬೆಳೆದಂತೆ ಕೆಲ ನಡವಳಿಕೆಯ ತೊಂದರೆಗಳು ಕಾಣಿಸಿಕೊಳ್ಳಬಹುದು. ಉದಾ : ಶಾಲೆಯಿಂದಾಗಲೀ, ಮನೆಯಿಂದಾಗಲೀ ತಪ್ಪಿಸಿಕೊಂಡು ಓಡಿಹೋಗುವುದು, ಸಣ್ಣ-ಪುಟ್ಟ ಕಳ್ಳತನದಲ್ಲಿ ತೊಡಗುವುದು, ಇತ್ಯಾದಿ.

**20) ಕಲಿಕಾ ನ್ಯೂನತೆಯ ಮಕ್ಕಳನ್ನು ತಜ್ಞರಿಗೆ ತೋರಿಸುವುದರಿಂದಾಗುವ ಉಪಯೋಗ ಏನು?**

ಯಾವುದೇ ಒಬ್ಬ ತಜ್ಞರ ಸಹಾಯ ಇಂತಹ ಮಕ್ಕಳಿಗೆ ಸಾಲದು, ವಾಕ್-ಭಾಷಾ ಹಾಗು, ಶೈಕ್ಷಣಿಕ ಮನೋವಿಜ್ಞಾನ ಹಾಗೂ ವಿಶೇಷ ಶಿಕ್ಷಣ ತಜ್ಞರ ಒಟ್ಟು ಸಹಾಯದಿಂದ ಇಂತಹ ಮಕ್ಕಳಿಗೆ ಕಲಿಸುವುದು ಉತ್ತಮ.

ಕಲಿಕಾನ್ಯೂನತೆಯ ಸ್ಥಿತಿಯನ್ನು ಪತ್ತೆಹಚ್ಚುವುದು ಸುಲಭಸಾಧ್ಯವಲ್ಲ. ಇದು ಒಂದು ತಜ್ಞರ ಗುಂಪು ನೆರವೇರಿಸಬೇಕಾದ ಕಾರ್ಯ. ಮನೋವಿಜ್ಞಾನಿ, ವಿಶೇಷ ಶಿಕ್ಷಕರು, ಮಾತು-ಭಾಷಾ ತಜ್ಞರು, ಶ್ರವಣ ತಜ್ಞರು, ಮಕ್ಕಳ ತಜ್ಞರು ಎಲ್ಲಾ ಒಟ್ಟುಗೂಡಿ, ಚರ್ಚಿಸಿ, ಭಾಷಾ ಲಕ್ಷಣಗಳನ್ನು ಗಮನದಲ್ಲಿರಿಸಿಕೊಂಡು, ರೋಗನಿದಾನವನ್ನು ಗುರುತುಹಚ್ಚುವುದು ಸಾಮಾನ್ಯವಾಗಿ ಪಾಲಿಸಲ್ಪಡುವ ಪದ್ಧತಿಯಾಗಿದೆ. ಆದರೆ ಈ ಸೌಕರ್ಯ ಎಲ್ಲಾ ಕಡೆಯೂ ಇಲ್ಲದಿರುವುದೇ ಒಂದು ದೊಡ್ಡ ಅಡಚಣೆಯಾಗಿದೆ.

**21) ಕಲಿಕಾನ್ಯೂನತೆ ಇರುವ ಮಕ್ಕಳಲ್ಲಿ ಕಲಿಕೆ ಹೆಚ್ಚು ಫಲಪ್ರದವಾಗುವಂತೆ ಮಾಡುವಲ್ಲಿ ಶಿಕ್ಷಕರ ಮತ್ತು ಪೋಷಕರ ಪಾತ್ರವೇನು?**

ಕಲಿಕಾ ನ್ಯೂನತೆ ಇರುವ ಮಕ್ಕಳನ್ನು ಶಿಶುವಿಹಾರದ ಮಟ್ಟದಲ್ಲೇ ಕಂಡುಹಿಡಿಯುವುದರಿಂದ ಓದುವ ಕಲೆಗೆ ಬೇಕಾಗಬಹುದಾದ ತರಬೇತಿಯನ್ನು ಚಿಕ್ಕವಯಸ್ಸಿನಲ್ಲೇ ಕೊಡಬಹುದು. ಇದರಿಂದ ಶೈಕ್ಷಣಿಕ ಒತ್ತಡಗಳಿಗೆ ಹೊಂದಿಕೊಳ್ಳಲು ಮಕ್ಕಳಿಗೆ ಸುಲಭವಾಗುತ್ತದೆ.

- ಕಲಿಕಾ ನ್ಯೂನತೆ ಇರುವ ಮಕ್ಕಳನ್ನು ನಡವಳಿಕೆಯ ದೋಷವಿರುವ ಮಕ್ಕಳು ಎಂದು ತಪ್ಪಾಗಿ ಪರಿಗಣಿಸದೆ, ನಡವಳಿಕೆ ತಿದ್ದುವ ವ್ಯರ್ಥಪ್ರಯತ್ನ ಮಾಡಬಾರದು.

- ಕಲಿಕಾನ್ಯೂನತೆ ಇರುವ ಮಕ್ಕಳನ್ನು ಹಂತ–ಹಂತವಾಗಿ ಮೇಲೆತರಲು ಮನೆ ಮತ್ತು ಶಾಲೆಯಲ್ಲಿ ಪ್ರೋತ್ಸಾಹ ನೀಡಬೇಕು.
- ಬೇರೆ ಮಕ್ಕಳೆದುರು ಕಲಿಕಾ ನ್ಯೂನತೆ ಇರುವ ಮಕ್ಕಳನ್ನು ಶಿಕ್ಷಕರಾಗಲಿ, ಪೋಷಕರಾಗಲಿ ಅವಹೇಳನ ಮಾಡಬಾರದು.
- ತಾಯಿ–ತಂದೆಯರೊಟ್ಟಿಗೆ ಸಮಾಲೋಚಿಸಿ ಕಲಿಸುವ ಚೌಕಟ್ಟನ್ನು ನಿರ್ಧರಿಸಬೇಕು.
- ಸಾದ್ಯವಾದಲ್ಲೆಲ್ಲಾ ಪುಸ್ತಕದಲ್ಲಿ ಬರೆದಿರುವುದನ್ನು ಓದಿಸದೆ, ಶಿಕ್ಷಕರೇ ಓದಿ, ಅರ್ಥೈಸಿದರೆ ಒಳ್ಳೆಯದು.

ಕಲಿಕಾ ನ್ಯೂನತೆಯುಳ್ಳ ಮಕ್ಕಳು ಸಾಮಾನ್ಯವಾಗಿ ನಿಧಾನಗತಿಯ ಮಾತಿನ ಬೆಳವಣಿಗೆಯನ್ನು ಹೊಂದಿರುತ್ತಾರೆ ಎಂಬು ಸಂಶೋಧನೆಗಳು ಸ್ಪಷ್ಟಪಡಿಸಿವೆ. ಅಷ್ಟೇ ಅಲ್ಲದೆ ಅವರಿಗೆ ಒಂದೇ ಸಮನಾಗಿ ಕೇಳುವ, ಕಾಣುವ ಶಬ್ದಗಳು, ಅಕ್ಷರಗಳು, ವ್ಯತ್ಯಾಸಗಳು ತಿಳಿಯದೇ ಇರಬಹುದು, ಎಡ–ಬಲಗಳ ದಿಕ್ಕುಗಳು ಗೊಂದಲಮಯವಾಗಬಹುದು. ಮಾತಿನ ಸ್ವರಗಳು ದೊಡ್ಡ–ದೊಡ್ಡ ಪದಗಳಲ್ಲಿ ಅದಲು ಬದಲಾಗುವ ಸಂಭವವೂ ಉಂಟು. ಭಾಷಾ ಬೆಳವಣಿಗೆಯಲ್ಲಿ ಭಾಷಾ ಗ್ರಹಿಸುವಿಕೆಯಲ್ಲಿ ವಯಸ್ಸಿಗನುಗುಣವಾಗಿದ್ದರೂ ಸಹ ಭಾಷೆ ಉಪಯೋಗಿಸುವುದರಲ್ಲಿ, ಅದರಲ್ಲೂ ಕ್ಲಿಷ್ಟ ವಾಕ್ಯರಚನೆ ಮತ್ತು ಸಂದರ್ಭಕ್ಕನುಗುಣವಾಗಿ ಭಾಷೆ ಉಪಯೋಗಿಸುವುದರಲ್ಲಿ ಹಿಂದುಳಿದಿರುತ್ತಾರೆಂಬುದು ಸ್ಪಷ್ಟವಾಗಿದೆ.

## 22) ಮಿದುಳಿನ ಆಘಾತದಿಂದ ಉಂಟಾಗುವ ನ್ಯೂನತೆಗಳ ಭಾಷಾ ಲಕ್ಷಣಗಳು ಯಾವುವು?

ಭಾಷೆ ಬೆಳವಣಿಗೆಯಲ್ಲಿ ಮಿದುಳಿನ ಪಾತ್ರ ಅಪಾರ. ಮೆದುಳಿನ ಸೂಚನೆಯ ಮೇರೆಗೆ ಬಾಯಿಯ ಅವಯವಗಳು ಮತ್ತು ಇತರ ನಿರ್ದಿಷ್ಟ ಅಂಗಗಳ ಸಹಾಯದಿಂದ 'ಭಾಷೆ' ಎಂಬ ಸಂಕೇತದಿಂದ ಮಗು ಸಂವಹನ ಪ್ರಾರಂಭಿಸುತ್ತದೆ.

ಮೆದುಳಿಗೆ ಆಘಾತವಾದಾಗ, ಮೆದುಳಿನ ನಿಸ್ಸತ್ವತೆ ಅಥವಾ ಅಪಸ್ಮಾರದಿಂದ ಭಾಷೆಯ ಬೆಳವಣಿಗೆ ಕುಂಠಿತವಾಗುತ್ತದೆ ಅಥವಾ ವಾಕ್‌ಸ್ತಂಭ ಎಂಬ ಸ್ಥಿತಿ ಉಂಟಾಗುವ ಸಾಧ್ಯತೆ ಇದೆ.

ಮಿದುಳಿನ ನಿಸ್ಸತ್ವತೆ ಇರುವ ಮಗುವು ದೈಹಿಕ ಚಟುವಟಿಕೆಗಳಿಂದ ಕೈಕಾಲುಗಳನ್ನು ಸ್ವತಂತ್ರವಾಗಿ ಆಡಿಸುವುದು, ಮಾತಿನ ಅವಯವಗಳ ಚಾಲನೆಯಲ್ಲಿ ಹೊಂದಾಣಿಕೆ ಮಾಡುವುದು ಅಸಾಧ್ಯ. ಮಗುವಿನಲ್ಲಿ ಮಾಂಸಖಂಡಗಳು ಬಿಗುವಾಗಿರಬಹುದು ಅಥವಾ ತೀವ್ರವಾಗಿ ಸಡಿಲವಾಗಿದ್ದು, ಅನಿಯಂತ್ರಿತ ಚಲನೆಗಳಿಂದ ಕೂಡಿದ್ದು, ಹೊರನೋಟಕ್ಕೆ ಇತರರಿಗಿಂತ ಭಿನ್ನವಾಗಿ ಕಾಣುವುದು ಸರ್ವೇ ಸಾಮಾನ್ಯ. ಹಲವು ರೀತಿಯ ಮಿದುಳಿನ ನಿಸ್ಸತ್ವತೆಯನ್ನು ಚಲನೆಯ ದೌರ್ಬಲ್ಯಕ್ಕನುಸಾರವಾಗಿ ವಿಂಗಡಿಸಲಾಗಿದೆ. ಕೈಗಳು, ಕಾಲುಗಳು, ದೇಹದ ಒಂದೇ ಒಂದು ಪಾರ್ಶ್ವ (ಎಡ ಅಥವಾ ಬಲಭಾಗ) ಅಥವಾ ಯಾವುದೇ ಸಮ್ಮಿಶ್ರ ಸ್ಥಿತಿಯಲ್ಲಿಯೂ ದೌರ್ಬಲ್ಯ ಕಾಣಿಸಿಕೊಳ್ಳಬಹುದು. ಇಂತಹ ಮಕ್ಕಳಲ್ಲಿ ಚಲನಾ ನಿಯಂತ್ರಣದ ದೋಷವಷ್ಟೇ ಅಲ್ಲದೆ, ಶ್ರವಣ, ದೃಷ್ಟಿ, ಮಾತು–ಭಾಷೆ, ಕಲಿಕೆ– ಇನ್ನಿತರ ದೋಷಗಳೂ ಇರುವ ಸಾಧ್ಯತೆ ಇದೆ.



ಮಿದುಳಿನ ನಿಸ್ಸತ್ವತೆ ಇರುವ ಮಗು

ಜೊಲ್ಲು ಸುರಿಯುವಿಕೆ ಮಿದುಳಿನ ನಿಸ್ಸತ್ವತೆ ಇರುವ ಮಕ್ಕಳಲ್ಲಿ ಹೆಚ್ಚಾಗಿ ಕಂಡುಬರುವ ಒಂದು ಲಕ್ಷಣ. ಸಾಮಾನ್ಯವಾಗಿ ಇಂತಹ ಮಕ್ಕಳಲ್ಲಿ ತಿನ್ನುವುದು (ಅಗಿಯುವುದು, ನುಂಗುವುದು) ಕುಡಿಯುವುದು (ಹೀರುವುದು ಇತ್ಯಾದಿ) ತೊಂದರೆಗಳು ಕಾಣಿಸಿಕೊಳ್ಳುವುದು. ತುಟಿ, ನಾಲಿಗೆ ಹಾಗೂ ದವಡೆಗಳ ಅಸಮರ್ಪಕ ಚಲನೆಯಿಂದ

ಮಾತಿನಲ್ಲಿಯೂ ವಿವಿಧ ಶಬ್ದಗಳ ಉಚ್ಚಾರಣೆಯಲ್ಲಿ ದೋಷಗಳು ಕಂಡುಬರುತ್ತವೆ.

### 23) ಮಿದುಳಿನ ನಿಸ್ಸತ್ವತೆ ಮತ್ತು ಆಘಾತದಿಂದ ಉಂಟಾದ ಭಾಷಾ ನ್ಯೂನತೆಗಳಿರುವ ಚಿಕಿತ್ಸಾ ಕ್ರಮಗಳು ಏನು ?

ಮಿದುಳಿನ ನಿಸ್ಸತ್ವತೆ ನಿರ್ದಿಷ್ಟ ದೌರ್ಬಲ್ಯತೆಗಳ ಪರೀಕ್ಷೆ ಹಾಗೂ ತರಬೇತಿ ಕಾರ್ಯಕ್ರಮಗಳ ಯೋಜನೆಯ ತಯಾರಿಕೆ ಹಲವು ವಿಶೇಷ ತಜ್ಞರನ್ನು ಒಳಗೊಂಡಿದೆ. ಭೌತಿಕ ರೋಗ ಚಿಕಿತ್ಸಕರು (Physiotherapist) ಮಗುವಿನ ಸ್ನಾಯು ಪಕ್ವತೆಯನ್ನು ಪರೀಕ್ಷಿಸಿ, ದೈನಂದಿನ ಚಟುವಟಿಕೆಗಳನ್ನು ಮಾಡಲು ಮಗುವಿಗೆ ಸಾಧ್ಯವೇ ಎಂದು ತೀರ್ಮಾನಿಸುತ್ತಾರೆ. ಮಾತು-ಭಾಷಾ ತಜ್ಞರು, ಶ್ರವಣ ತಜ್ಞರು, ಮಾನಸಿಕ ತಜ್ಞರು ವಿಶೇಷ ಶಿಕ್ಷಣ ತಜ್ಞರು ಇನ್ನಿತರರು ಇಂತಹ ಮಕ್ಕಳಲ್ಲಿರುವ ನ್ಯೂನತೆಗಳನ್ನು ಅರಿತು ಅದಕ್ಕೆ ಸೂಕ್ತ ಪರಿಹಾರ/ಚಿಕಿತ್ಸೆ/ತರಬೇತಿಗಳನ್ನು ಸೂಚಿಸುತ್ತಾರೆ.




ಮಿದುಳಿನ ನಿಸ್ಸತ್ವತೆಯುಳ್ಳ ಮಗುವಿಗೆ ಚಿಕಿತ್ಸೆ

ಮಿದುಳಿನ ನಿಸ್ಸತ್ವತೆಯುಳ್ಳ ಕೆಲವು ಮಕ್ಕಳಿಗೆ ಉಸಿರಾಟದ, ಬಾಯಿಯ ಸ್ನಾಯುಗಳ ತೀವ್ರಮಟ್ಟದ ದೌರ್ಬಲ್ಯದಿಂದಾಗಿ ಮಾತನ್ನೇ ಕಲಿಯಲು ಸಾಧ್ಯವಾಗದಿರಬಹುದು. ಸಂವಹನ ಚಟುವಟಿಕೆಯ ಅಭಾವದಿಂದಾಗಿ ಮಗು ಸಾಮಾಜಿಕ ಮತ್ತು ಮಾನಸಿಕ ಬೆಳವಣಿಗೆಯಲ್ಲಿ ಕುಂಠಿತವಾಗಿರುವುದು ಹಾಗು ದೌರ್ಬಲ್ಯತೆಯನ್ನು ಹೊಂದುವುದು ಸಾಮಾನ್ಯ. ಇದನ್ನು ತಡೆಗಟ್ಟಲು ಇಂತಹ ಮಕ್ಕಳಿಗೆ ಬೇರೆ ರೀತಿಯ ಸಂವಹನ ಮಾಧ್ಯಮವನ್ನು ಅಳವಡಿಸುವುದು ಅತ್ಯಗತ್ಯ. ಸಂವಹನದ ಹಲಗೆಗಳು (Communication Board), ಚಿತ್ರಗಳು, ಚಿಹ್ನೆಗಳು ಇತರರೊಡನೆ ಸಂಭಾಷಿಸಲು ಹಾಗೂ ಮಾತು-ಭಾಷೆಯ ಬೆಳವಣಿಗೆಗೆ ಸಹಾಯವಾಗುತ್ತದೆ.

ಈ ಮೇಲಿನ ಎಲ್ಲಾ ಸ್ಥಿತಿಗಳೂ ಸಾಮಾನ್ಯವಾಗಿ ಭಾಷಾಗ್ರಹಿಕೆ ಮತ್ತು ಭಾಷೆಯ ಉಪಯೋಗಿಸುವಿಕೆಗೆ ಅಡ್ಡಿಮಾಡಿದರೂ ಸಹ ಹಲವೊಮ್ಮೆ ಭಾಷಾಗ್ರಹಿಕೆಯ ಶಕ್ತಿ ಕುಂಠಿತವಾಗದೆ ಭಾಷೆ ಉಪಯೋಗಿಸುವ ಶಕ್ತಿಯಲ್ಲಷ್ಟೇ ಮಗು ಹಿಂದುಳಿಯುವ ಸಾಧ್ಯತೆ ಇದೆ. ಮೆದುಳಿಗೆ ಪೆಟ್ಟಾದಾಗ ಉಂಟಾಗುವ ಸ್ಥಿತಿ ಭಾಷೆಗಷ್ಟೆ ಆಘಾತ ಮಾಡದೆ ಇನ್ನಿತರ ಸಂಬಂಧವುಳ್ಳ ಕೌಶಲಗಳನ್ನು ಕುಂಠಿತ ಮಾಡುವುದರಿಂದ (ಗ್ರಹಣ ಶಕ್ತಿ, ಮಾಂಸಖಂಡಗಳ ಶಕ್ತಿ) ಮಾತು ಮತ್ತು ಭಾಷೆ ಎರಡರಲ್ಲೂ ದೋಷ ಉಂಟಾಗುವ ಸಂಭವ ಹೆಚ್ಚು. ಮಿದುಳಿನ ಆಘಾತವಾದಾಗ ಮಗುವನ್ನು ತಜ್ಞರ ಗುಂಪು ಪರಿಶೀಲಿಸಿ ಸೂಕ್ತ ಚಿಕಿತ್ಸೆಗೆ ಒಳಪಡಿಸುವುದು ಉಚಿತ.

# ಅಭ್ಯಾಸ–5

1) ಮಾತು ಮತ್ತು ಭಾಷಾದೋಷಗಳು ಒಂದೇ ಎಂದು ಪರಿಗಣಿಸಲಾಗಿದೆ. (ಸರಿ)(ತಪ್ಪು) ಗುರುತುಹಾಕಿ
2) ಭಾಷಾದೋಷಗಳನ್ನು ವಯಸ್ಸಿಗನುಗುಣವಾಗಿ ___ ಮತ್ತು ___ ಎಂದು ವಿಂಗಡಿಸಲಾಗಿದೆ.
3) ಭಾಷಾದೋಷಗಳನ್ನು ಹೆಸರಿಸಿ.
4) ಸಂಜ್ಞಾನಾತ್ಮಕ ಲೋಪದಿಂದ ಉಂಟಾಗುವ ನಿಧಾನಗತಿಯ ಭಾಷಾಸ್ಥಿತಿ _____ ಮಕ್ಕಳಲ್ಲಿರುತ್ತದೆ.
5) ಕ್ಷೀಣ ಏಕಾಗ್ರತೆ, ______ ಮಕ್ಕಳಲ್ಲಿರುತ್ತದೆ.

6) ಮಾತಿನ ಸ್ವರಗಳನ್ನು ಪುನರಾವರ್ತಿಸುವುದು ____ ಮಕ್ಕಳಲ್ಲಿ ಕಂಡುಬರುತ್ತದೆ.
7) ಭಾಷೆ ಕಲಿತ ನಂತರ ಉಂಟಾಗುವ ಶ್ರವಣ ದೋಷದಿಂದ _____ ಮಾತ್ರ ಹಿಂದುಳಿಯುತ್ತದೆ.
8) ಕಲಿಕಾ ನ್ಯೂನತೆಯುಳ್ಳ ಮಕ್ಕಳಲ್ಲಿ ಕಂಡುಬರುವ ಮುಖ್ಯ ಅಂಶಗಳು ___ ___ ___
9) ವಯಸ್ಕರ ಭಾಷಾ ದೋಷಗಳು ___ ___ ___ ಕಾರಣಗಳಿಂದ ಉಂಟಾಗುತ್ತದೆ.
10) ತಜ್ಞರ ಗುಂಪಿನ ಸಹಾಯ ____ ಮತ್ತು ____ ಸ್ಥಿತಿಗಳಿಗೆ ಬಲು ಮುಖ್ಯ.

## ಅಧ್ಯಾಯ-6

# ಮಾತು-ಭಾಷಾ ದೋಷಗಳ ತಡೆಗಟ್ಟುವಿಕೆ/ತರಬೇತಿ

### 1) ಮಾತು-ಭಾಷಾ ದೋಷಗಳನ್ನು ತಡೆಗಟ್ಟುವುದು ಸಾಧ್ಯವೇ ?

ಮಾತು-ಭಾಷಾ ದೋಷಗಳನ್ನು ಪೂರ್ವಭಾವಿಯಾಗಿ ತಡೆಗಟ್ಟಲು ಸೂಕ್ತ ಯೋಜನೆಗಳನ್ನು ಹಮ್ಮಿಕೊಳ್ಳುವುದು ಬಲು ಮುಖ್ಯ. ಅಂಕಿ-ಅಂಶಗಳ ಪ್ರಕಾರ ಶೇಕಡ 5-[illegible]ಕ್ತಿಗಳು ಮಾತು-ಭಾಷಾ ದೋಷಗಳನ್ನು ಹೊಂದಿರುವುದು ಕಂಡುಬಂದಿದೆ. ಅಂತೆಯೇ, ಇಂತಹ ಸ್ಥಿತಿಗಳು ಮಕ್ಕಳಲ್ಲಿ ಹೆಚ್ಚಾಗಿ ಕಂಡುಬರುತ್ತದೆಂದೂ ತಿಳಿದಿದೆ.




ತೊದಲುವಿಕೆಯಿದ್ದರೆ ಗುರುತಿಸಿ, ತಿಳಿಹೇಳಿ.

ಮಾತು-ಭಾಷಾ ದೋಷಗಳನ್ನು ಮೂರು ಹಂತಗಳಲ್ಲಿ ತಡೆಗಟ್ಟುವುದು ಸಾಧ್ಯ - ಪ್ರಾಥಮಿಕ, ಮಧ್ಯಂತರ ಹಾಗೂ ಅಂತಿಮ ಹಂತಗಳಲ್ಲಿ ತಡೆಗಟ್ಟಬಹುದು. ಹೀಗೆ ತಡೆಗಟ್ಟಿದರೆ ಮಾತ್ರ ಹೆಚ್ಚು ಹೆಚ್ಚು ವ್ಯಕ್ತಿಗಳು ದೋಷಕ್ಕೊಳಗಾಗುವ ಪರಿಸ್ಥಿತಿಯನ್ನು ಹತೋಟಿಯಲ್ಲಿಡಬಹುದು. ಇಂತಹ ಯೋಜನೆಗಳಿಗೆ ಮಾತು-ಭಾಷಾ ತಜ್ಞರಷ್ಟೇ ಅಲ್ಲದೆ ಸಮಾಜ ಮತ್ತು ಇನ್ನಿತರ ತಜ್ಞರೂ ಸಹ ಸ್ಪಂದಿಸಿ ಕಾರ್ಯನಿರ್ವಹಣೆಯಲ್ಲಿ ಕೈಗೂಡಿಸುವುದು ಬಲು ಮುಖ್ಯ. ಇದರ ಅರಿವನ್ನು ಮೂಡಿಸಲು ತಕ್ಕ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದೂ ಅವಶ್ಯಕ. ಅನಕ್ಷರಸ್ಥರಿಗೆ ತಿಳುವಳಿಕೆಯನ್ನು ಮೂಡಿಸಲು (ಪುಸ್ತಕ ಮಾಧ್ಯಮದ ಬದಲಾಗಿ) ಬಾನುಲಿಗಳು, ಬೀದಿನಾಟಕಗಳು, ಲಾವಣಿಗಳು, ಜಾನಪದ ಗೀತೆಗಳ ಮೂಲಕ ಶ್ರಮಿಸುವುದು ಬಲು ಮುಖ್ಯ.

ಭಾಷಾ ದೋಷಗಳನ್ನು ಪತ್ತೆ ಹಚ್ಚಲು ಮತ್ತು ಅದರ ತೀವ್ರತೆಯನ್ನು ಅರಿಯಲು ವಯಸ್ಸಿಗನುಗುಣವಾಗಿ, ಸ್ಥಿತಿಗನುಗುಣವಾಗಿ ನಿರ್ದಿಷ್ಟವಾದ ಗುರಿಯಿಟ್ಟು ಬಹುತೇಕ ಪ್ರಶ್ನಾವಳಿಗಳನ್ನು ತಯಾರಿಸಲಾಗುತ್ತದೆ. ಕೆಲವನ್ನು ಅನುಬಂಧದಲ್ಲಿ ಕೊಡಲಾಗಿದೆ. ಪ್ರತಿಯೊಬ್ಬ ಪ್ರಜೆಯೂ ಇದರ ಗುರುತರವಾದ ಜವಾಬ್ದಾರಿಯನ್ನು ಅರಿತು ತನ್ನ ಪರಿಧಿಯಲ್ಲಿ ಕಂಡುಬರುವ ವ್ಯಕ್ತಿಗಳನ್ನು ಅಥವಾ 'at risk' ಮಗು ಮತ್ತು ವ್ಯಕ್ತಿಗಳನ್ನು ಗುರುತಿಸಿದಲ್ಲಿ ಬಹುಪಾಲು

ಮಕ್ಕಳು ಮತ್ತು ವ್ಯಕ್ತಿಗಳು ಮಾತಿನ ದೋಷದ ದುಃಸ್ಥಿತಿಗಿಳಿಯುವುದನ್ನು ತಡೆಗಟ್ಟಲು ಸಾಧ್ಯ.

### 2) ಮಾತು–ಭಾಷಾ ದೋಷಗಳ ನಿವಾರಣೆಯಲ್ಲಿ ಪೋಷಕರ, ಶಿಕ್ಷಕರ ಮತ್ತು ಸಮಾಜದ ಜವಾಬ್ದಾರಿ ಏನು ?

ಈ ದೋಷಗಳ ನಿವಾರಣೆಯಲ್ಲಿ ಪೋಷಕರ, ಶಿಕ್ಷಕರ ಹಾಗು ಸಮುದಾಯದ ಬೆಂಬಲ ಅತ್ಯಗತ್ಯ. ಒಂದು ವ್ಯಕ್ತಿಯು ತನ್ನ ಸಮಾಜದೊಂದಿಗೆ, ಸಮವಯಸ್ಕರೊಂದಿಗೆ, ಸ್ನೇಹಿತರೊಂದಿಗೆ, ಕುಟುಂಬದವರೊಂದಿಗೆ ವ್ಯವಹರಿಸುವುದು ಮಾತು–ಭಾಷಾ ಕ್ರಿಯೆಯ ಮೂಲ ಉದ್ದೇಶ. ಆದುದರಿಂದ ಎಲ್ಲ ಗುಂಪಿನ ಜನರೂ ವಾಕ್, ಭಾಷಾ ದೋಷಗಳ ಚಿಕಿತ್ಸಾ / ತರಬೇತಿ / ನಿವಾರಣೆ / ಯೋಜನೆಯಲ್ಲಿ ಒಂದಿಲ್ಲೊಂದು ರೀತಿ ಭಾಗಿಯಾಗಬೇಕು. ಹಾಗಾದಾಗ ಮಾತ್ರ ಮಾತು–ಭಾಷಾ ದೋಷವುಳ್ಳ ವ್ಯಕ್ತಿ ಅತಿ ಶೀಘ್ರದಲ್ಲಿ ಬೇರೆಯವರಂತೆ ಸಂವಹನ ನಡೆಸಲು ಸಾಧ್ಯ.



ಮುಕ್ತ ಶಾಲೆಯತ್ತ ಮಾತು–ಭಾಷಾ ದೋಷಗಳಿರುವ ಮಕ್ಕಳು

### 3) ಮಾತು–ಭಾಷಾ ದೋಷವಿರುವ ಮಕ್ಕಳು ಎಲ್ಲರಂತೆ ಶಾಲೆಯಲ್ಲಿ ಕಲಿಯಲು ಸಾಧ್ಯವೇ?

ಹೌದು ಸಾಧ್ಯವಿದೆ. ಸರ್ಕಾರದ ಆದೇಶದ ಪ್ರಕಾರ ಪ್ರತಿಯೊಂದು ಮಗುವಿಗೂ ಸೂಕ್ತವಾದ ಅಧಿಕೃತ ಶಾಲೆಯ ಅವಕಾಶ ದೊರಕಬೇಕು. ಆದರೆ ಹಲವೊಮ್ಮೆ ತೀವ್ರಗತಿಯ ಬುದ್ಧಿಮಾಂದ್ಯತೆ ಅಥವಾ ಶ್ರವಣ ಶಕ್ತಿ ಕುಂಠಿತವಾಗಿರುವ ಮಕ್ಕಳು ಎಲ್ಲರಂತೆ ಸಾಮಾನ್ಯ ಶಾಲೆಯಲ್ಲಿ ಕಲಿಯಲು ಕಷ್ಟವಾಗಬಹುದು. ಅಂತಹ ಮಕ್ಕಳಿಗೆ ವಿಶೇಷ ಶಾಲೆಯ ಅವಕಾಶ ಲಭ್ಯವಿದೆ. ಅಷ್ಟೇ ಅಲ್ಲದೆ, ಕೆಲವು ಸಾಮಾನ್ಯ ಶಾಲೆಗಳಲ್ಲಿ ವಿಶೇಷ ಮಕ್ಕಳಿಗಾಗಿ ಸಂಪನ್ಮೂಲ ಕೊಠಡಿಗಳ ಅವಕಾಶವಿದೆ. ಅಂತಹ ಶಾಲೆಯಲ್ಲಿ ತಂತನತೆ ಇರುವವರಿಗೆ, ಕಲಿಕಾ ನ್ಯೂನತೆ ಇರುವವರಿಗೆ ಪ್ರತ್ಯೇಕವಾಗಿ ಗಮನವಿರಿಸಿ, ಹೆಚ್ಚಿನ ತರಬೇತಿ, ವಿದ್ಯಾಭ್ಯಾಸ ನೀಡುವ ಸೌಕರ್ಯವೂ ಇರುತ್ತದೆ. ಪೋಷಕರು ತಜ್ಞರ ಸೂಚನೆಯಂತೆ ತಮ್ಮ ಮಕ್ಕಳ ಕೌಶಲಕ್ಕನುಗುಣವಾಗಿ ಸೂಕ್ತ ಶಾಲಾವಕಾಶ ದೊರಕಿಸಿಕೊಟ್ಟಾಗ ವಿಶೇಷ ಮಕ್ಕಳೂ ಸಹ ಇತರ ಮಕ್ಕಳಂತೆ ಶಾಲೆಯಲ್ಲಿ ಕಲಿಯಲು ಅವಕಾಶ ದೊರೆಯುತ್ತದೆ.

ಹಲವಾರು ಬಾರಿ ಸಾಮಾನ್ಯ ಶಾಲೆ, ವಿಶೇಷ ಶಾಲೆ ಮತ್ತಿತರ ವ್ಯವಸ್ಥೆ ಕೆಲವು ಸ್ಥಿತಿಯುಳ್ಳ ಮಕ್ಕಳಿಗೆ ಸೂಕ್ತವಾಗಿರುವುದಿಲ್ಲ. ಅಂತಹ ಮಕ್ಕಳು 'ಮುಕ್ತ ಶಾಲೆ'(open school)ಯಲ್ಲಿ ಅಭ್ಯಸಿಸುವ ಅವಕಾಶವಿದೆ. ಮುಕ್ತ ಶಾಲೆಯು ಶಾಲಾ ಪಠ್ಯಕ್ರಮಗಳ ಜೊತೆ ಪಠ್ಯೇತರ ವಿಷಯಗಳನ್ನೂ ಕಲಿಸಿ ಮಕ್ಕಳು ತಮ್ಮ ಮುಂದಿನ ಜೀವನವನ್ನು ರೂಪಿಸಿಕೊಳ್ಳಲು, ಯೋಜಿಸಲು ಸಹಾಯ ಮಾಡುತ್ತದೆ. ಒಟ್ಟಾರೆ ವಿಶೇಷ ಮಕ್ಕಳು ಇತರ ಮಕ್ಕಳಂತೆ ಶಾಲೆಯಲ್ಲಿ ಕಲಿಯಲು ಸರ್ಕಾರ ಸೌಲಭ್ಯಗಳನ್ನು ನೀಡಿದೆ ಎಂಬುದು ಗಮನಾರ್ಹ.

### 4) ತೊದಲು/ಉಗ್ಗು – ಏನು ಮಾಡಬೇಕು?

ತೊದಲು/ಉಗ್ಗು ದೋಷಗಳಿಗೆ ಹಲವಾರು ಬಾರಿ ನಿರ್ದಿಷ್ಟ ಕಾರಣವನ್ನು ಗುರುತಿಸಲು ಆಗದಿದ್ದರೂ ಅದರ ತರಬೇತಿಗೆ ಅನುಕೂಲವಾಗುವಂತೆ ಹಲವಾರು ಬಗೆಯ ಚಿಕಿತ್ಸಾವಿಧಾನ/ತರಬೇತಿವಿಧಾನಗಳನ್ನು ಉಪಯೋಗಿಸಲಾಗುತ್ತಿದೆ. ಇದು ದೈಹಿಕ ರೋಗವಲ್ಲದ ಕಾರಣ ಯಾವುದೇ ರೀತಿಯ ಶಸ್ತ್ರಚಿಕಿತ್ಸೆ ಅಥವಾ ಔಷಧಗಳ ಸೇವನೆಯ ಅವಶ್ಯಕತೆ ಇರುವುದಿಲ್ಲ. ಇಂತಹ ದೋಷವುಳ್ಳ ಮಗು/ವ್ಯಕ್ತಿಯನ್ನು ಪ್ರಾರಂಭಿಕ ಹಂತದಲ್ಲೇ ಗುರುತಿಸಿ

ಸೂಕ್ತ ಚಿಕಿತ್ಸಾ ವಿಧಾನವನ್ನು ಅನುಸರಿಸುವುದರಿಂದ ಸ್ಥಿತಿ ಉಲ್ಬಣಗೊಳ್ಳುವುದನ್ನು ತಡೆಗಟ್ಟಬಹುದಲ್ಲದೆ ಮಗು/ವ್ಯಕ್ತಿಯು ತನ್ನ ವಾಕ್‌ಶಕ್ತಿಯ ಮೇಲೆ ಸಂಪೂರ್ಣ ಹತೋಟಿ ಪಡೆದುಕೊಳ್ಳಲು ಸಾಧ್ಯ. ಆದರೂ ಕೆಲವು ತೀವ್ರ ಸ್ವರೂಪದ ತೊಂದರೆಯನ್ನು ಸಂಪೂರ್ಣ ಹತೋಟಿಯಲ್ಲಿಡುವುದು ಬಹಳ ಕಷ್ಟಕರವಾಗಬಹುದು. ಇಂತಹ ಸ್ಥಿತಿಯುಳ್ಳ ವ್ಯಕ್ತಿಗೆ ಒಂದು ತಜ್ಞರ ಗುಂಪಿನ ಸೂಕ್ತ ಮಾರ್ಗದರ್ಶನ, ಬಂಧು–ಬಳಗ ಹಾಗೂ ಸಹಪಾಠಿ/ಸ್ನೇಹಿತರ ಬೆಂಬಲ ಮತ್ತು ಎಲ್ಲಕಿಂತ ಹೆಚ್ಚಾಗಿ ತೊದಲುವ ವ್ಯಕ್ತಿಯ ಸ್ವಯಂ ಮನಸ್ಥೈರ್ಯ, ಛಲ, ಆತ್ಮವಿಶ್ವಾಸ ಹಾಗೂ ಸತತ ಅಭ್ಯಾಸ ಬಹುಮುಖ್ಯ.

ಹಲವಾರು ಚಿಕ್ಕ ಮಕ್ಕಳಲ್ಲಿ ತೊದಲು/ಉಗ್ಗು ಸ್ಥಿತಿಯು ತನ್ನಂತೆ ತಾನೇ ಮಗು ಬೆಳೆದಂತೆ ಯಾರ ಸಹಾಯವಿಲ್ಲದೆ ಸರಿಹೋಗುವುದುಂಟು. ಆದರೆ ಯಾರಲ್ಲಿ ಇದು ಸಾಧ್ಯ ಅಥವಾ ಯಾರಿಗೆ ಚಿಕಿತ್ಸೆಯ ಅವಶ್ಯಕತೆ ಇದೆ ಎಂಬ ಸ್ಪಷ್ಟತೆಯ ಚಿತ್ರವನ್ನು ಸಂಶೋಧನೆಗಳು ನಿಖರವಾಗಿ ಮಂಡಿಸಿಲ್ಲ. ಬಹುತೇಕ ತೊದಲಿನ ಪ್ರಮಾಣ, ಅದರ ಏರುಪೇರು, ಕುಟುಂಬದವರಲ್ಲಿ ತೊದಲಿರುವಿಕೆ, ಮಗುವಿನ ಲಿಂಗ (ಹೆಣ್ಣುಮಕ್ಕಳಲ್ಲಿ ಇಂತಹ ಸ್ಥಿತಿ ಸ್ವಲ್ಪ ಅಪರೂಪ/ವಿರಳ) – ಇವುಗಳ ಮೇಲೆ ಅವಲಂಬಿತವಾಗಿದೆ. ಅಲ್ಲದೆ ಕೆಲವು ವೇಳೆ ತೊದಲು ತನ್ನಿಂದ ತಾನೇ ಸರಿಹೊಂದುವ ಸಾಧ್ಯತೆ ಇದೆ. ಇದು ಮಗುವಿನ ಅಥವಾ ಅವನ/ಳ ಸುತ್ತಮುತ್ತಲಲ್ಲಿರುವವರ ಪ್ರತಿಕ್ರಿಯೆ, ಪ್ರೋತ್ಸಾಹ ಇತ್ಯಾದಿಗಳನ್ನು ಅವಲಂಬಿಸಿರುತ್ತದೆ. ಆದುದರಿಂದ ಪೋಷಕರು ಮಗುವಿನ ತೊದಲನ್ನು ಅಲಕ್ಷಿಸದೆ ಆದಷ್ಟು ಬೇಗ ತಜ್ಞರನ್ನು ಸಂಪರ್ಕಿಸಿ ಸೂಕ್ತ ಮಾರ್ಗದರ್ಶನ ಪಡೆಯುವುದು ಅತ್ಯವಶ್ಯ. ಕೆಳಗೆ ನೀಡಿರುವ ಕೆಲವು ಸಲಹೆಗಳನ್ನು ಪೋಷಕರು ಪಾಲಿಸಿದಲ್ಲಿ ಉಗ್ಗು/ತೊದಲು ಉಲ್ಬಣವಾಗದಂತೆ ತಡೆಯಲು ಸಹಕಾರಿಯಾಗುತ್ತದೆ.

* ಮಗುವಿನ ಮೇಲೆ ಯಾವುದೇ ಒತ್ತಡವನ್ನು ಹೇರದೆ, ಮಗುವಿನ ಮೇಲಾಗುತ್ತಿರಬಹುದಾದ ಒತ್ತಡಗಳನ್ನು ಗುರುತಿಸಿ ಹೋಗಲಾಡಿಸುವುದು.

* ಮಗುವಿಗೆ ತನ್ನ ತೊದಲಿನ ಬಗೆಗಿರುವ ಆತಂಕ, ಉದ್ವೇಗಗಳನ್ನು ಹತ್ತಿಕ್ಕುವುದು. ಇತರರನ್ನು ಮಗುವಿನೊಂದಿಗೆ ಹೋಲಿಸಿ ಕೀಳರಿಮೆ ಬೆಳೆಸದಿರುವುದು.

* ಮಗುವಿನೊಂದಿಗೆ ನಿಧಾನವಾಗಿ ಮಾತನಾಡಿ ಮಗು ನಿಧಾನವಾಗಿ ಮಾತನಾಡಲು ಪ್ರೋತ್ಸಾಹಿಸುವುದು.

* ಮಗು ಮಾತನಾಡಲು ಹಿಂಜರಿಕೆ, ಆತಂಕ, ಅಂಜಿಕೆಗಳನ್ನು ತೋರಿಸಿದರೆ ಮಗುವನ್ನು ಸೂಕ್ತರೀತಿಯಲ್ಲಿ ಪ್ರೋತ್ಸಾಹಿಸಿ, ಎಲ್ಲಾ ರೀತಿಯ ಉತ್ತೇಜನ ನೀಡಿ, ಮಾತನಾಡುವ ರೀತಿಯ ಬಗ್ಗೆ ಅವನೊ(ಳೊ)ಡನೆ ಚರ್ಚಿಸಿ, ಭಯ, ಆತಂಕಗಳನ್ನು ಹೋಗಲಾಡಿಸುವುದು.

* ಮಗುವಿನ ಮಾತಿನ ತೊಂದರೆಯ ಬಗ್ಗೆ ಮಗುವಿನ ಎದುರಿನಲ್ಲಿ ಇತರರೊಡನೆ ಚರ್ಚಿಸಬಾರದು. ಇದು ಮಗುವಿನ ಸೂಕ್ಷ್ಮ ಮನಸ್ಸಿನ ಮೇಲೆ ಪರಿಣಾಮ ಬೀರಿ, ಕೀಳರಿಮೆ, ಹಿಂಜರಿಕೆಗಳನ್ನು ಹೆಚ್ಚಿಸಬಹುದು.

* ಮಗುವಿನೊಡನೆ ಹೆಚ್ಚು ಸಮಯ ಒಡನಾಡಿ, ವಿಷಯಗಳನ್ನು ತಿಳಿಸಿ, ಮಗುವಿನ ಭಾಷಾಜ್ಞಾನವನ್ನು ಹೆಚ್ಚಿಸುವುದು. ಅಲ್ಲದೇ, ಆಟೋಟಗಳಲ್ಲಿ ಆಸಕ್ತಿ ವಹಿಸಿ ಮಗುವಿನ ಆತ್ಮವಿಶ್ವಾಸವನ್ನು ಹೆಚ್ಚಿಸುವುದು.

* ಮಗು ಶಾಲೆಗೆ ಹೋಗುತ್ತಿದ್ದರೆ ಉಪಾಧ್ಯಾಯರೊಂದಿಗೆ ಆಗಾಗ್ಗೆ ಮಗುವಿನ ಪ್ರಗತಿಯ ಬಗ್ಗೆ ಮತ್ತು ಮಗುವಿನ ಮೇಲಿರುವ ಒತ್ತಡಗಳ ಬಗ್ಗೆ ಚರ್ಚಿಸಿ ಸೂಕ್ತ ಕ್ರಮ ಕೈಗೊಳ್ಳುವುದು.

* ಕುಟುಂಬದಲ್ಲಿ ಅಥವಾ ನೆರೆಹೊರೆಯಲ್ಲಿ ತೊದಲುವವರಿದ್ದರೆ ಅವರೊಂದಿಗೆ ಮಗುವಿನ ಸಂಪರ್ಕವನ್ನು ತಾತ್ಕಾಲಿಕವಾಗಿಯಾದರೂ ಕಡಿಮೆ ಮಾಡುವುದು ಒಳಿತು.

* ಒಟ್ಟಾರೆ ಮಗುವಿಗೆ ಸೂಕ್ತ ರೀತಿಯ ಮಾತಿನ ಕುಶಲತೆಯ ಬಗ್ಗೆ ಮಾಹಿತಿ ನೀಡುವುದು ಬಹುಮುಖ್ಯ.

## 6) ಸೀಳು ತುಟಿ/ಅಂಗುಳು – ಏನಾಗಬಹುದು?

ಮಗುವಿಗೆ ಏಳು ವರ್ಷದವರೆವಿಗೂ ಇತರ ಮಕ್ಕಳಂತೆಯೇ ಉಚ್ಚಾರಣಾ ಬೆಳವಣಿಗೆ ಉತ್ತಮಗೊಳ್ಳುತ್ತಾ ಹೋಗುತ್ತದೆ. ತದನಂತರ ಹೇಳಿಕೊಳ್ಳುವ ಅಭಿವೃದ್ಧಿಯೇನೂ ಕಾಣಿಸುವುದಿಲ್ಲ. ಕೇವಲ ಸೀಳುತುಟಿ, ಕೇವಲ ಸೀಳುಅಂಗುಳು, ಸೀಳು ತುಟಿಯ ಜತೆ ಸೀಳು ಅಂಗುಳು– ಈ ಮೂರು ಸ್ಥಿತಿಗಳಲ್ಲಿ ಕೇವಲ ಸೀಳುತುಟಿ ಇರುವವರ



ಸೀಳುತುಟಿಯುಳ್ಳ ಮಗು

ಉಚ್ಚಾರಣೆ ಇತರ ಸ್ಥಿತಿಗಳಿಗಿಂತ ಉತ್ತಮವಾಗಿರುತ್ತದೆ. ಇದರಲ್ಲೂ, ಮೃದು ಅಂಗುಳಿನಲ್ಲಿ ಮಾತ್ರ ಸೀಳು ಇರುವವರ ಉಚ್ಚಾರಣೆ ಇತರ ಸ್ಥಿತಿಗಳಿಗಿಂತ ಉತ್ತಮವಾಗಿರುತ್ತದೆ. ತುಟಿ ಮತ್ತು ಅಂಗಳುಗಳಲ್ಲಿ ಎರಡು ಕಡೆಗಿಂತ ಒಂದೇ ಕಡೆ ಸೀಳಿದ್ದರೆ ಉಚ್ಚಾರಣೆ ಉತ್ತಮವಾಗಿರುತ್ತದೆ. ಹುಡುಗರಿಗೆ ಹೋಲಿಸಿದರೆ ಹುಡುಗಿಯರಲ್ಲಿ ಕಡಿಮೆ ಉಚ್ಚಾರಣೆ ದೋಷಗಳಿರುತ್ತದೆ. ಮೊದಲೇ ಶಸ್ತ್ರಚಿಕಿತ್ಸೆ ನಡೆದವರಲ್ಲಿ ನಂತರ ನಡೆಸಿದವರಿಗಿಂತ ಕಡಿಮೆ ಉಚ್ಚಾರಣಾ ದೋಷಗಳಿರುತ್ತದೆ. ಮುಖ್ಯವಾಗಿ ಅಂಗುಳಿನಲ್ಲಿ ಸೀಳಿದ್ದರೆ ಸ್ವರಗಳೆಲ್ಲವೂ ಮೂಗಿನಿಂದ ಹೊರಬಂದಂತೆ ಕೇಳಿಸುತ್ತದೆ. ವ್ಯಂಜನಗಳಲ್ಲಿ ಅನುನಾಸಿಕಗಳನ್ನು ಇವರು ಸಾಧಾರಣವಾಗಿ ಸರಿಯಾಗಿ ಉಚ್ಚರಿಸುತ್ತಾರೆ. ಇವನ್ನು ಹೊರತುಪಡಿಸಿ ಅಂತಸ್ಥಗಳಾದ ಯ, ರ, ಲ, ವ ಗಳು, ಸ್ಪರ್ಶಗಳು (ಐದು ವರ್ಗಗಳ 25 ವ್ಯಂಜನಗಳು), ಹಾಗೂ ಊಷ್ಮಗಳ (ಶ, ಷ, ಸ, ಹ) ಉಚ್ಚಾರಣೆಯಲ್ಲಿ ಅತಿ ಹೆಚ್ಚು ದೋಷವಿರುತ್ತದೆ.

### i. ಉಚ್ಚಾರಣೆ :

ಸಾಧಾರಣವಾಗಿ ತ, ಥ, ದ, ಧ ಮತ್ತು ಜ, ಚ, ಧ, ಝ, ಸ, ಶ ಇವುಗಳ ಉಚ್ಚಾರಣೆಯಲ್ಲಿ ಹೆಚ್ಚು ತೊಂದರೆಯಿರುತ್ತದೆ. ನಾಲಿಗೆಯ ತುದಿಯಿಂದ ಉಚ್ಚರಿಸಲ್ಪಡುವ ಶಬ್ದಗಳು ಮತ್ತು ನಾಲಿಗೆಯ ಹಿಂಭಾಗದಿಂದ ಉಚ್ಚರಿಸಲ್ಪಡುವ ಶಬ್ದಗಳು ತುಟಿಯಿಂದ ಉಚ್ಚರಿಸಲ್ಪಡುವ ಶಬ್ದಗಳಿಗಿಂದ ಹೆಚ್ಚು ದೋಷಯುಕ್ತವಾಗಿರುತ್ತದೆ.

ಘೋಷಸಹಿತ (ಸ್ವರಸಹಿತ) ಶಬ್ದಗಳ ಉಚ್ಚಾರಣೆ (ಗ, ಘ, ಜ, ಝ, ಡ, ಢ, ದ, ಧ, ಬ, ಭ) ಅಘೋಷ ಶಬ್ದಗಳಿಂದ (ಕ, ಖ, ಚ, ಛ, ಟ, ಠ, ಥ, ಪ, ಫ) ಉತ್ತಮವಾಗಿರುತ್ತದೆ. ಒತ್ತಕ್ಷರಗಳಿಗಿರುವ ವ್ಯಂಜನಗಳ ಉಚ್ಚಾರಣೆಗಿಂತ (ಸ್ತ, ಸ್ಕ, ಸ್ಟ, ಕ್ಲ, ಕ್ರ, ಕ್ಮ, ...) ಒತ್ತಕ್ಷರಗಳಿಲ್ಲದ ಸರಳ ಶಬ್ದಗಳ ಉಚ್ಚಾರಣೆ ಉತ್ತಮವಾಗಿರುತ್ತದೆ. ಪದದ ಮಧ್ಯದಲ್ಲಿರುವ ಶಬ್ದಗಳ ಉಚ್ಚಾರಣೆ ಪದದ ಮೊದಲಿರುವ ಶಬ್ದಗಳ ಉಚ್ಚಾರಣೆಗಿಂದ ಹೆಚ್ಚು ಸ್ಪಷ್ಟವಾಗಿರುತ್ತದೆ. ಸ್ಪರ್ಶಗಳು ಗಂಟಲಿನಿಂದ ಹೇಳಿದಂತೆ ಕೇಳಿಸುತ್ತವೆ. ಒಂದು ಶಬ್ದದ ಬದಲು ಇನ್ನೊಂದು ಶಬ್ದವನ್ನು ಉಚ್ಚರಿಸುವಾಗ ಸಾಧಾರಣವಾಗಿ ಎರಡು ಶಬ್ದಗಳ ಉಚ್ಚಾರಣಾ ಕ್ರಮ ಒಂದೇ ವಿಧವಾಗಿರುತ್ತದೆ. ಊಷ್ಮಗಳೂ ಕೂಡ ಗಂಟಲ ಕುಳಿಯಿಂದ ಅಥವಾ ಧ್ವನಿತಂತುವಿನಿಂದಲೇ ಬಂದಂತಿರುತ್ತವೆ. ಊಷ್ಮಗಳ ಮತ್ತು ಸ್ಪರ್ಶಗಳ ಬದಲು ಇವರು ಭಾಷೆಯಲ್ಲಿಲ್ಲದ ಇತರ ಶಬ್ದಗಳನ್ನೂ ಉಚ್ಚರಿಸುತ್ತಾರೆ. ಈ ದೋಷವಿರುವವರಲ್ಲಿ ಉಚ್ಚಾರಣೆ ಯಾವಾಗಲೂ ಒಂದೇ ರೀತಿಯಾಗಿರುವುದಿಲ್ಲ, ಬದಲಾಯಿಸುತ್ತಿರುತ್ತದೆ.

### ii. ಧ್ವನಿಯ ದೋಷಗಳು

ಸಾಧಾರಣವಾಗಿ ಇಂತಹ ದೋಷಗಳಿರುವ ವ್ಯಕ್ತಿಗಳ ಧ್ವನಿ ಮೂಗಿನಿಂದ ಮಾತನಾಡಿದಂತಿರುತ್ತದೆ. ಇವರ ಧ್ವನಿಯು ಗೊಗ್ಗರು, ಉಸಿರು ತುಂಬಿಕೊಂಡಂತೆ ಮುಂತಾಗಿ ಇರಬಹುದು. ಬಾಯಿಯಲ್ಲಿ ಸಾಕಷ್ಟು ಗಾಳಿ ಹಿಡಿಯಲಾಗದುದರಿಂದ ಅಥವಾ ಮೆತ್ತಗೆ ಹೇಳಿದರೆ ದೋಷ ಅಷ್ಟು ಗೊತ್ತಾಗುವುದಿಲ್ಲ ಎಂದು ಮೆತ್ತಗೆ ಮಾತನಾಡುವುದರಿಂದ ಇವರ ಧ್ವನಿಯಲ್ಲಿ ದೋಷಗಳಿರುತ್ತವೆ. ಇ, ಉ, ಈ ಸ್ವರಗಳು ಹೆಚ್ಚು ಮೂಗಿನಲ್ಲಿ ಮಾತನಾಡಿದಂತೆ ಕೇಳಿಸುತ್ತದೆ.

ದೋಷಯುಕ್ತ ಶಬ್ದಗಳು ಹೆಚ್ಚು ಮೂಗಿನಿಂದ ಮಾತನಾಡುವಂತೆ ಕೇಳಿಸುತ್ತವೆ. ಧ್ವನಿಯ ಶ್ರುತಿ ಎತ್ತರವಿದ್ದರೆ, ಧ್ವನಿಯ ಗಟ್ಟಿತನ ಜಾಸ್ತಿಯಾದರೆ ಮೂಗಿನಿಂದ ಮಾತನಾಡುವುದು ಕಡಿಮೆಯಾದಂತೆ ಕೇಳಿಸುತ್ತದೆ. ಇವರ ಧ್ವನಿಯಲ್ಲಿ ಏರಿಳಿತಗಳು ಅತಿಯಾಗಿರುತ್ತವೆ. ಇದಲ್ಲದೇ ಮಾತನಾಡುವಾಗ ಸಾಧಾರಣವಾಗಿ ಮೂಗಿನ ಹೊಳ್ಳೆಗಳನ್ನು ಕುಗ್ಗಿಸುವುದು. ತಲೆ ತಗ್ಗಿಸುವುದು ಇತ್ಯಾದಿಗಳು ಮಾತನ್ನು ಇನ್ನಷ್ಟು ದೋಷಯುಕ್ತವಾಗಿ ಮಾಡುತ್ತದೆ.

# ಅಭ್ಯಾಸ–6

1) ಮಾತು–ಭಾಷಾ ದೋಷಗಳನ್ನು ತಡೆಗಟ್ಟಲು ಯಾವುದಾದರೂ ನಾಲ್ಕು ಕ್ರಮಗಳನ್ನು ಹೆಸರಿಸಿ.
2) ಮಾತು–ಭಾಷಾ ದೋಷಗಳನ್ನುಳ್ಳ ಮಕ್ಕಳಿಗೆ ನೀಡಬಹುದಾದ ಶಿಕ್ಷಣಸೌಲಭ್ಯಗಳ ಬಗ್ಗೆ ತಿಳಿಸಿ
3) ತೊದಲುಮಾತಿನ ದೋಷಕ್ಕೆ ಚಿಕಿತ್ಸೆ ಬೇಕಿಲ್ಲ ಸರಿ ☐ ತಪ್ಪು ☐
4) ತೊದಲುಮಾತಿನ ಮಗುವಿನ ಪೋಷಕರು ತರಬೇತಿಗೆ ಯಾವ ರೀತಿ ಸಹಾಯ ಮಾಡಬಹುದು?
5) ಸೀಳುತುಟಿ/ಅಂಗುಳಿರುವವರ _______ ಹಾಗೂ ______ ಗಳ ಉಚ್ಚಾರಣೆಯಲ್ಲಿ ದೋಷವಿರುತ್ತದೆ.
6) ಧ್ವನಿದೋಷಗಳಿರುವವರು _______ ನಿಂದ ಮಾತನಾಡಿದಂತೆ ಕೇಳುತ್ತದೆ.
7) ಧ್ವನಿದೋಷಗಳಿರುವ ವ್ಯಕ್ತಿಗಳ ಮಾತಿನ ಲಕ್ಷಣಗಳನ್ನು ತಿಳಿಸಿ.

# ಅಧ್ಯಾಯ–7

# ಮನೆಯಂಗಳದ ಚಟುವಟಿಕೆಗಳು

## 1) ಮಕ್ಕಳ ಮಾತು ಹಾಗೂ ಭಾಷೆಯ ಬೆಳವಣಿಗೆ ತರಬೇತಿ ವಿಧಾನಗಳು



ಮಗುವನ್ನು ಅಕ್ಕರೆಯಿಂದ ಕಾಣಿರಿ

ಮಕ್ಕಳಲ್ಲಿ ಮಾತು ಹಾಗು ಭಾಷೆಯ ಬೆಳವಣಿಗೆ ವಯಸ್ಸಿಗೆ ತಕ್ಕಂತೆ ಬರುವುದು ಸಹಜ. ಆದರೆ ಈ ಬೆಳವಣಿಗೆಗೆ ತಂದೆ ತಾಯಿಯರ ಪ್ರೀತಿ, ಸಹಕಾರ, ಪ್ರೋತ್ಸಾಹ ಹಾಗು ಕಲಿಸುವ ವಾತಾವರಣ ಬಹಳ ಮುಖ್ಯ. ಸಾಮಾನ್ಯವಾಗಿ ಮಗುವಿನ ತಾಯಿ ಕೆಲಸದಲ್ಲಿ ತೊಡಗಿದ್ದರೂ ಸಹ ತನ್ನ ಮಗುವಿನೊಂದಿಗೆ ಮಾತನಾಡಿಕೊಂಡಿರುತ್ತಾಳೆ. ಮಗುವು ತೊದಲು ನುಡಿಗಳನ್ನಾಡಿದಾಗ ಅವಳು ಮಗುವನ್ನು ಹೆಚ್ಚು ಹೆಚ್ಚು ಮಾತನಾಡಲು ಪ್ರೋತ್ಸಾಹಿಸುತ್ತಾಳೆ. ತಾಯಿ ಮಾತ್ರವಲ್ಲದೆ, ಮನೆಯಲ್ಲಿರುವ ಇತರರೂ ಸಹ ಮಗುವಿನ ಮಾತು ಅಥವಾ ಭಾಷೆಯ ಬೆಳವಣಿಗೆಯಲ್ಲಿ ನೆರವಾಗುತ್ತಾರೆ. ಇವೆಲ್ಲವುಗಳ ಅಭಾವವಿದ್ದರೆ ಮಗು ಮಾತು ಅಥವಾ ಭಾಷೆಯ ಬೆಳವಣಿಗೆಯಲ್ಲಿ ಹಿಂದುಳಿಯುವ ಸಾಧ್ಯತೆಯಿದೆ. ತಂದೆ-ತಾಯಿಯರು ತಮ್ಮ ಮಗುವನ್ನು ಮಗುವಾಗಿರಲು ಬಿಡದೆ ತೊದಲು ನುಡಿಗಳನ್ನು ಆಡಿದಾಗ, ಹಾಸ್ಯ ಮಾಡುವುದಾಗಲಿ, ಅತಿಯಾಗಿ ಮಾತನ್ನು ತಿದ್ದುವುದಾಗಲಿ, ಬೈಯುವುದಾಗಲಿ ಮಾಡುತ್ತಿದ್ದರೆ ಮಗುವು ಮಾತು ಅಥವಾ ಭಾಷೆಯ ಬೆಳವಣಿಗೆಯಲ್ಲಿ ಹಿಂದುಳಿಯುವ ಸಾಧ್ಯತೆಯಿದೆ.

ಭಾಷೆಯ ಬೆಳವಣಿಗೆಯಲ್ಲಿ ತಾಯಿ ಹಾಗು ಮಗುವಿನ ಪರಸ್ಪರ ಸಂಭಾಷಣೆ ಬಹಳ ಮುಖ್ಯವೆಂದು ತಿಳಿದಿದೆ. ತಾಯಿಯು ಮಗುವಿನೊಂದಿಗೆ ಮಾತನಾಡುವಾಗ ತನ್ನ ಮಾತಿನ ಶೈಲಿಯಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡುವುದು ಉಂಟು. ಅವಳು ಹೇಗೆ ಮಾತನಾಡುತ್ತಾಳೆ, ಯಾವ ಯಾವ ಶೈಲಿಗಳನ್ನು ಅಳವಡಿಸಿಕೊಳ್ಳುತ್ತಾಳೆ, ಯಾವ ಮಾರ್ಪಾಡುಗಳನ್ನು ಮಾಡುತ್ತಾಳೆ ಎಂಬ ಅಂಶಗಳು ಬಹಳ ಮುಖ್ಯ. ಈ ಅಂಶಗಳನ್ನು ಚೆನ್ನಾಗಿ ಅಭ್ಯಸಿಸಿ ಮಾತು ಹಾಗು ಭಾಷೆಯ ಬೆಳವಣಿಗೆಯಲ್ಲಿ ಹಿಂದುಳಿದಿರುವ ಮಕ್ಕಳಿಗೆ ಮಾತು ಹಾಗು ಭಾಷೆಯನ್ನು ಕಲಿಸಲು ಹಲವು ವಿಧಾನಗಳನ್ನು ಸೂಚಿಸಲಾಗಿದೆ. ಈ ವಿಧಾನಗಳನ್ನು ಮಾತು ಹಾಗು ಭಾಷೆಯ ಬೆಳವಣಿಗೆಯ ವಿವಿಧ ಹಂತಗಳಲ್ಲಿ ಅಳವಡಿಸಿಕೊಳ್ಳಬೇಕಾಗುತ್ತದೆ.

### i. ಪುನರಾವರ್ತಿಸುವುದು

ಈ ವಿಧಾನದಲ್ಲಿ ಹಿರಿಯರು ಮಗು ಆಡುವ ಮಾತನ್ನು ಅದೇ ರೀತಿ ಉಚ್ಛರಿಸುತ್ತಾರೆ. ಹಲವು ಕಡೆ ಮಗುವಿನ ಮಾತು ಅರ್ಥವಾಗದಿದ್ದರೆ, ಈ ಭಾಗಕ್ಕೆ ಪ್ರಶ್ನಾರ್ಥಕ ಚಿಹ್ನೆಯನ್ನು ಸೇರಿಸುತ್ತಾರೆ ಅಥವಾ ಪ್ರಶ್ನಾರ್ಥಕ ಧ್ವನಿಯನ್ನು ಅಳವಡಿಸಿಕೊಳ್ಳುತ್ತಾರೆ. ನೀವೂ ಸಹಾ ಹೀಗೆ ಮಾಡಿ ಇದರಿಂದ ಮಗುವಿಗೆ ತಾನಾಡಿದ ಯಾವ ಮಾತು ಹಿರಿಯರಿಗೆ ಅರ್ಥವಾಗಲಿಲ್ಲ ಎಂದು ತಿಳಿದು ಅದನ್ನು ಮಾತ್ರ ಸರಿಪಡಿಸಿಕೊಳ್ಳಲು ಗಮನ ಹರಿಸಿದಂತಾಗುತ್ತದೆ.

**ಉದಾಹರಣೆ :**

ಮಗು : ನಂದು ಕೇಕಲು

ತಾಯಿ : ಏನು ನಿಂದು, ಏನಿದೆ ನಿನ್ನ ಹತ್ತಿರ?

ಮಗು : ಕೈ ಕಲ್ಲು

ತಾಯಿ : ಓ ಸೈಕಲ್ಲಾ, ನಿನ್ನ ಹತ್ತಿರ ಸೈಕಲ್ ಇದೆಯಾ?

ಮಗು : ದೊದ್ದು

ತಾಯಿ : ಹೌದಾ, ನಿನ್ನ ಹತ್ತಿರ ದೊಡ್ಡ ಸೈಕಲ್ ಇದೆಯಾ?



ಸೈಕಲ್

### ii. ಮಾತಿನ ಅನುಕರಣೆ

ಈ ವಿಧಾನದಲ್ಲಿ ಮಗು ತಂದೆ-ತಾಯಿಯರಾಡಿದ ಮಾತನ್ನು ಅದೇ ರೀತಿ ಪುನರುಚ್ಚರಿಸಬೇಕು. ಮಗುವಿನ ಭಾಷೆಯ ಮಟ್ಟಕ್ಕಿಂತ ಕಷ್ಟವಾದ ವಾಕ್ಯವನ್ನು ಅನುಕರಣೆ ಮಾಡಲು ಕಷ್ಟವಾಗುತ್ತದೆ. ಅನುಕರಣೆಯು ಮಗುವಿನ ಜ್ಞಾಪಕಶಕ್ತಿಯನ್ನು ಅವಲಂಬಿಸಿದೆ. ಆದ್ದರಿಂದ, ಈ ವಿಧಾನವನ್ನು ಉಪಯೋಗಿಸುವಾಗ ಮಗುವಿನ ಭಾಷೆಯ ಮಟ್ಟಕ್ಕಿಂತ ಸ್ವಲ್ಪವೇ ಕಷ್ಟವಾದ ಭಾಷೆಯನ್ನು ಬಳಸಬೇಕು. ನೀವು ಆರಿಸಿಕೊಳ್ಳುವ ವಾಕ್ಯವನ್ನು ಮಗುವಿನ ಜ್ಞಾಪಕಶಕ್ತಿಗೆ ಅನುಗುಣವಾಗಿ ಆರಿಸಿಕೊಳ್ಳಿ.

ಹೊಸ ಹೊಸ ವ್ಯಾಕರಣಗಳನ್ನು ಕಲಿಯಲು, ತನಗೆ ಗೊತ್ತಿರುವ ಪದಗಳನ್ನು ಎಂತಹ ವಾಕ್ಯದಲ್ಲಿ ಹೇಗೆ ಉಪಯೋಗಿಸಬಹುದೆಂಬುದನ್ನು ಈ ವಿಧಾನ ಮಗುವಿಗೆ ಕಲಿಸುತ್ತದೆ. ಈ ವಿಧಾನವು ಭಾಷೆಯ ನೀತಿ-ನಿಯಮಗಳನ್ನು ಪರಿಚಯಿಸುವುದಲ್ಲದೆ ಮಗುವು ಸಹಜವಾಗಿ ಮಾತನಾಡಲು ಸಹಾಯ ಮಾಡುತ್ತದೆ.

**ಉದಾಹರಣೆ**

ತಾಯಿ : ನಾನು ಹೇಳಿದ್ದನ್ನು ಹೇಳು "ಇದು ಐಸ್‌ಕ್ರೀಮ್"

ಮಗು : ಇ .... ಏತ್ ತೀಮ್

ತಾಯಿ : ಅಲ್ಲ, ಹೇಳು "ಇದು ಐಸ್‌ಕ್ರೀಮ್"

ಮಗು : ಇ .... ದು ಐತ್ ತೀಮ್

ತಾಯಿ : ಮತ್ತೊಮ್ಮೆ ಹೇಳು "ಇದು ಐ....ಸ್.... ಕ್ರೀಮ್"

ಮಗು : ಇದು ಐಸ್ ಕ್ರೀ....ಮ್

ತಾಯಿ : ಜಾಣ



ಐಸ್‌ಕ್ರೀಮ್

### iii. ಮಾದರಿ ವಿಧಾನ

ಈ ವಿಧಾನದಲ್ಲಿ ಹಿರಿಯರು ಮಕ್ಕಳಿಗೆ ಹೆಚ್ಚು ಹೆಚ್ಚು ವಿಷಯಗಳನ್ನು ತಿಳಿಸಬೇಕು. ನಿಮ್ಮ ವಾಕ್ಯಗಳು ಕಷ್ಟಕರವಾಗಿದ್ದರೂ ಪರವಾಗಿಲ್ಲ; ಏಕೆಂದರೆ ಮಾದರಿ ವಿಧಾನದ ಉದ್ದೇಶ ನಿಮ್ಮ ಮಕ್ಕಳಿಗೆ ಇವುಗಳನ್ನು ಹೇಳಿಕೊಡುವುದಲ್ಲ, ಆದರೆ ಅದರ ಅರ್ಥ ಕಲಿಸುವುದು. ನೀವು ಮಗುವಿಗೆ ಭಾಷೆಯನ್ನು ಗ್ರಹಿಸಲು ಹಾಗು ಗ್ರಹಿಸಿದ ವಿಷಯಗಳ ಬಗ್ಗೆ ಯೋಚಿಸಲು ಅವಕಾಶ ಮಾಡಿಕೊಡಿ. ಈ ವಿಧಾನ ಉಪಯೋಗಿಸುವಾಗ ನೀವು ಎರಡು ಅಂಶಗಳನ್ನು ನೆನಪಿನಲ್ಲಿಡಿ.

1. ಮಗುವು ಹೇಳಿದ ಮಾತನ್ನು ಪುನರುಚ್ಛರಿಸಿ, ಹೆಚ್ಚು ಪದಗಳನ್ನು ಸೇರಿಸಿ ಇನ್ನೂ ಅರ್ಥಪೂರ್ಣ ವಾಕ್ಯವನ್ನಾಗಿ ಮಾಡಿ.

2. ಮಗುವಿನ ವಾಕ್ಯ ಸರಿಪಡಿಸುವುದಾಗಲೀ ಅಥವಾ ಅದನ್ನು ಪುನಃ ಹೇಳುವುದಾಗಲೀ ಮಾಡದಿರಿ.

**ಇದರಲ್ಲಿ ಎರಡು ವಿಧಾನಗಳಿವೆ**

1. ಮಗುವು ಮಾತಾಡುವ ಮುಂಚೆಯೇ ತಾಯಿ ಮಾತನಾಡುತ್ತಾಳೆ. ನಂತರ ಮಗುವು ಮಾತನಾಡುತ್ತವೆ.

2. ಮೊದಲು ಮಗುವು ಮಾತನಾಡುತ್ತದೆ. ಅನಂತರ ತಾಯಿಯು ಅದಕ್ಕೆ ಉತ್ತರಿಸುತ್ತಾಳೆ. ಅಥವಾ ಅದಕ್ಕೆ ಸಂಬಂಧಪಟ್ಟದ್ದನ್ನು ಮಾತನಾಡುತ್ತಾಳೆ, ಆದರೆ ಅದನ್ನು ಸರಿಪಡಿಸುವುದಿಲ್ಲ ಅಥವಾ ಪುನಃ ಹೇಳುವುದಿಲ್ಲ.

**ಉದಾಹರಣೆ :**

ಮಗು : ಅಮ್ಮ ಪೆಪ್ಪಿ...

ತಾಯಿ : ಇಲ್ಲ ಈಗ ಬೇಡ, ನಾಳೆ ಅಂಗಡಿಗೆ ಹೋಗಿ ಪೆಪ್ಪರ್‌ಮಿಂಟ್ ಕೊಂಡುಕೊಳ್ಳೋಣ.

ಮಗು : ಅಮ್ಮ ಬಿಕ್ಕಿ...

ತಾಯಿ : ಸರಿ, ಪೆಪ್ಪರ್‌ಮಿಂಟ್, ಬಿಸ್ಕೆಟ್ ಎರಡೂ ನಾಳೆ ತೆಗೆದುಕೊಳ್ಳೋಣ.

ಮಗು : (ಮಗುವು 'ಏಕೆ?' ಎಂದು ಪ್ರಶ್ನಾರ್ಥಕ ಭಾವವನ್ನು ಮುಖದಲ್ಲಿ ಸೂಚಿಸುತ್ತದೆ)

ತಾಯಿ : ಈಗ ಅಂಗಡಿ ಮುಚ್ಚಿರುತ್ತೆ. ಅದಕ್ಕೆ ನಾಳೆ ಹೋಗೋಣ.

ಮಗು : ಓ! ನಾಳೆ ಅಂಗಡಿ, ಪೆಪ್ಪಿ ಬಿಕ್ಕಿ (ಚಪ್ಪಾಳೆ)



ಚಿತ್ರ ತೋರಿಸಿ ಹೇಳಿಕೊಡಿ

**iv) ವ್ಯತ್ಯಾಸವರಿಯುವ ಮಾದರಿ**

ಈ ವಿಧಾನದಲ್ಲಿ ಮಗುವಿಗೆ ಸರಿ ಮತ್ತು ತಪ್ಪು ಗುರುತಿಸುವ ಬಗ್ಗೆ ಮಾದರಿಯನ್ನು ನೀಡಿರಿ. ಮಗುವು ಸರಿಯಾದುದನ್ನು ಗುರುತಿಸಿ ಹೇಳಿದರೆ ಪ್ರೋತ್ಸಾಹ ನೀಡಿರಿ.

**ಉದಾಹರಣೆ :**

ತಾಯಿ : ಈ ಚಿತ್ರ ನೋಡು, ಈಗ ಹೇಳು ಹುಡುಗ ನಡೀತಿದ್ದಾನೋ ಓಡುತ್ತಿದ್ದಾನೋ?

ಮಗು : ಹುಡುಗ ಓಡ್ತಾ ಇದ್ದಾನೆ

ತಾಯಿ : ಜಾಣ, ಸರಿಯಾಗಿ ಹೇಳಿದೆ, ತಗೋ ಚಾಕಲೇಟ್!



ಮಗುವಿಗೆ ತಿಳಿಯದ್ದನ್ನು ತಿಳಿಸಿಕೊಡಿ

**v) ಕ್ರಿಯೆ ವಿಧಾನ**

ಒಂದು ಸಂದರ್ಭವನ್ನು ವಿವರಿಸಿ ಅದನ್ನು ಅಭಿನಯಿಸಿ ತೋರಿಸುವುದೇ ಈ ವಿಧಾನದ ಮುಖ್ಯ ಅಂಶ. ಇದರಲ್ಲಿ ಮಗು ಸಹಾ ಅಭಿನಯದಲ್ಲಿ ಪಾಲ್ಗೊಳ್ಳುವುದು. ಭಾಷೆಯನ್ನು ಸಂದರ್ಭಕ್ಕೆ ಹೊಂದಿಸುವುದೇ ಇದರ ಮುಖ್ಯ ಉದ್ದೇಶ. ಇದರಿಂದ ಮಗುವಿಗೆ ಬಹಳ ಬೇಗ ಭಾಷೆಯನ್ನು ಗ್ರಹಿಸಲು ಸಾಧ್ಯವಾಗುತ್ತದೆ. ಈ ವಿಧಾನವನ್ನು ಬಳಸಿದರೆ ಮಕ್ಕಳಿಗೆ ಬೇಸರ ಆಗುವುದಿಲ್ಲ.

**ಉದಾಹರಣೆ :**

ತಾಯಿ : ಬಾಗಿಲು ತೆಗಿ ಮಗು ನೋಡಿಲ್ಲಿ ನಾನ್ ಹೇಗೆ ತೆಗೀತಿದ್ದೀನಿ.

ಮಗು : (ತಾಯಿಯ ಜೊತೆ ಬಾಗಿಲು ತೆಗೆಯುತ್ತಾನೆ)

ತಾಯಿ : ಜಾಣ, ನೀನು ಈಗ ಬಾಗಿಲು ತೆಗೆದಿದ್ದೀಯಾ, ಈಗ ನನ್ನ ಜೊತೆ ಬಾಗಿಲು ಮುಚ್ಚು.

ಮಗು : (ತಾಯಿಯ ಜೊತೆ ಬಾಗಿಲು ಮುಚ್ಚುತ್ತಾನೆ).

## vi) ಆಜ್ಞೆಗಳು

ಏನು ಮಾಡಬೇಕೆಂದು ತಿಳಿಸುವ ವಾಕ್ಯಗಳನ್ನು ಆಜ್ಞೆ ಎನ್ನುತ್ತಾರೆ. ಈ ಆಜ್ಞೆಗಳನ್ನು, ಮಾತನ್ನು ಅರ್ಥಮಾಡಿಸಲು ಹಾಗೂ ಮಾತು ಆಡಿಸಲು ಬಳಸಿರಿ. ಆಜ್ಞೆಗಳು ಸರಳವಾಗಿರಬಹುದು ಅಥವಾ ಕಷ್ಟಕರವಾಗಿರಬಹುದು. ಮಗುವು ಆಜ್ಞೆಗಳನ್ನು ಅರ್ಥಮಾಡಿಕೊಂಡು, ತಾನು ಅರ್ಥಮಾಡಿಕೊಂಡದ್ದನ್ನು ಪಾಲಿಸುವುದರ ಮೂಲಕ ವ್ಯಕ್ತಪಡಿಸಬೇಕು. ಒಂದು ಮಗುವಿಗೆ ನೀವು ಆಜ್ಞೆ ಮಾಡಲು ಹೇಳಿಕೊಟ್ಟರೆ ಅವನೇ ತನ್ನ ವಾತಾವರಣವನ್ನು ತನ್ನ ಭಾಷೆಯ ಮೂಲಕ ನಿಯಂತ್ರಿಸಬಹುದೆಂದು ತಿಳಿದು, ಸ್ವತಃ ಉತ್ತೇಜಿಸಿಕೊಳ್ಳಲು ಸಹಾಯವಾಗುತ್ತದೆ.

**ಉದಾಹರಣೆ :**



ತಾಯಿ : ನನಗೆ ಟೇಬಲ್ ಮೇಲಿರುವ ಯಾವುದಾದರೊಂದು ಪುಸ್ತಕ ಕೊಡು.

ಮಗು : (ಕೊಡುತ್ತಾನೆ)

ತಾಯಿ : ಈಗ ಒಂದು ದೊಡ್ಡ ಪುಸ್ತಕ ಮತ್ತು ಒಂದು ಚಿಕ್ಕ ಪುಸ್ತಕ ಕೊಡು.

ಮಗು : (ಕೊಡುತ್ತಾನೆ) ತಾಯಿ : ಜಾಣ !

ತಾಯಿ : ಈಗ ದೊಡ್ಡ ಪುಸ್ತಕದ ಮೇಲೆ ಚಿಕ್ಕ ಪುಸ್ತಕ ಇಟ್ಟು ಅದನ್ನು ನನಗೆ ತಂದುಕೊಡು ನೋಡೋಣ!



ಮಗು : (ಕೊಡುತ್ತಾನೆ)

ತಾಯಿ : ಜಾಣ!

## vii) ಆಯ್ಕೆಯ ವಿಧಾನ

ಎಷ್ಟೋ ವೇಳೆ ಮಗುವು ಮಾತನಾಡಿದಾಗ ನಮಗೆ ಅರ್ಥವಾಗುವುದಿಲ್ಲ, ಏಕೆಂದರೆ,

ಅ) ಮಗುವು ಸ್ಪಷ್ಟವಾಗಿ ಮಾತನಾಡದಿರುವುದಿಲ್ಲ ಅಥವಾ

ಆ) ವಾಕ್ಯದಲ್ಲಿ ಸರಿಯಾದ ಪದಗಳನ್ನು ಆರಿಸಿ ಉಪಯೋಗಿಸಿರುವುದಿಲ್ಲ.

ಮಕ್ಕಳ ಉದ್ದೇಶ ತಿಳಿಯಲು ಈ ವಿಧಾನವನ್ನು ಉಪಯೋಗಿಸಿರಿ. ನೀವು ಸಂದರ್ಭಕ್ಕೆ ಒಪ್ಪುವಂತಹ ಎರಡು–ಮೂರು ಉತ್ತರ ಕೊಡಿ. ಪ್ರಶ್ನೆಗೆ ಹೊಂದುವ ಉತ್ತರವನ್ನು ಆರಿಸಲು ನಿಮ್ಮ ಮಗುವಿಗೆ ತಿಳಿಸಿರಿ. ನೀವು ಈ ವಿಧಾನ ಉಪಯೋಗಿಸಿದರೆ ನಿಮ್ಮ ಮಗುವಿಗೆ ಹೊಸ ತರಹದ, ಕಷ್ಟಕರವಾದ ವಾಕ್ಯಗಳನ್ನು ಪರಿಚಯ ಮಾಡಿಸಬಹುದು.

**ಉದಾಹರಣೆ (1)**

ಮಗು : ತಿಂಡಿ!

ತಾಯಿ : ಏನು? ತಿನ್ನಲಿಕ್ಕೇನಾದರೂ ಬೇಕಾ ? ಇಡ್ಲಿ ಬೇಕೋ ಚಪಾತಿ ಬೇಕೋ ?


ನಾಯಿಯೊಡನಿರುವ ಹುಡುಗಿಯ ಚಿತ್ರ

ಮಗು : ಇಡ್ಲಿ

ತಾಯಿ : ಎಷ್ಟು ಇಡ್ಲಿ ತಿಂತೀಯಾ ? ಒಂದೋ ಎರಡೋ ?

ಮಗು : ಎರಡು

ಚಿತ್ರಗಳನ್ನು ತೋರಿಸಿ ಸಹ ಮಕ್ಕಳಿಗೆ ಈ ವಿಧಾನ ಹೇಳಿಕೊಡಬಹುದು.

**ಉದಾಹರಣೆ (2)**

ನಾಯಿಯ ಚಿತ್ರ ತೋರಿಸಿ;

ತಾಯಿ : ಹುಡುಗಿ ಏನ್ ಎತ್ಕೊಂಡಿದ್ದಾಳೆ?
ನಾಯಿನೋ? ಬೆಕ್ಕೋ?

ಮಗು : ನಾಯಿ

ತಾಯಿ : ಸರಿ, ಹುಡುಗಿ ನಾಯಿ ಎತ್ಕೊಂಡಿದ್ದಾಳೆ. ನಿನಗೆ ಯಾವ
ಪ್ರಾಣಿ ಇಷ್ಟ? ಮೊಲಾನೋ? ಬೆಕ್ಕೋ?

ಮಗು : ಮೊಲ

## vii) ಹಿಗ್ಗಿಸುವುದು

ಈ ವಿಧಾನದಲ್ಲಿ ಮಗುವಿನ ವಾಕ್ಯವನ್ನು ಹಿಗ್ಗಿಸಿರಿ, ಸರಿಪಡಿಸಿರಿ ಮತ್ತು ದೊಡ್ಡವರ ಭಾಷೆಯ ರೂಪಕ್ಕೆ ತನ್ನಿ. ಹೀಗೆ ಮಾಡುವುದರಿಂದ ನಿಮ್ಮ ಮಗುವಿನ ಮಾತು ಅರ್ಥಬದ್ಧ ಹಾಗೂ ವ್ಯಾಕರಣಬದ್ಧವಾಗಿರಲು ಸಾಧ್ಯ. ಮಗುವಿಗೆ ಮಾತನ್ನು ಸರಿಯಾದ ರೂಪಕ್ಕೆ ಹಿಗ್ಗಿಸುವು[illegible] ಮಗುವಿಗೆ ತನ್ನ ಅನಿಸಿಕೆಯನ್ನು ಭಾಷೆಯ ಮೂಲಕ ಹೇಗೆ ಸ್ಪಷ್ಟವಾಗಿ ವ್ಯಕ್ತಪಡಿಸಬೇಕೆಂಬುದು ತಿಳಿಯುತ್ತದೆ. ಭಾಷೆಯನ್ನು:

ಅ) ವ್ಯಾಕರಣಬದ್ಧವಾಗಿ ಹಿಗ್ಗಿಸಬಹುದು ಅಥವಾ

ಆ) ಅರ್ಥಬದ್ಧವಾಗಿ ಹಿಗ್ಗಿಸಬಹುದು.

**ವ್ಯಾಕರಣಬದ್ಧ ಹಿಗ್ಗಿಸುವಿಕೆ**

**ಉದಾಹರಣೆ :**

ಮಗು : ಅಮ್ಮ ಚಕ್ಕಿ

ತಾಯಿ : ಹೇಳು, ನನಗೆ ಚಕ್ಲಿ ಬೇಕು.

ಮಗು : ಅಮ್ಮ ಚಕ್ಕಿ ಬೇಕು ಅಮ್ಮ! ಅಪ್ಪ

ತಾಯಿ : ಸರಿ ಈಗ ಅಪ್ಪ ಬರ್ತಾರೆ ಚಕ್ಲಿ ಕೊಡೋಣ

ಮಗು : ಅಮ್ಮ ನೀರು

ತಾಯಿ : ಅಯ್ಯೋ! ನೀರ್ ಚೆಲ್ಕೊಂಡ್ಯಾ! ನಿನ್ ಬಟ್ಟೆಯೆಲ್ಲಾ ಒದ್ದೆ

ಮಗು : ಅಮ್ಮ ಫಾಕ್

ತಾಯಿ : ಸರಿ ನಿಂಗೆ ಬೇರೆ ಫ್ರಾಕ್ ಹಾಕೋಣ



ಮಾತನ್ನು ಹಿಗ್ಗಿಸುವ ವಿಧಾನ

**ಅರ್ಥಬದ್ಧ ಹಿಗ್ಗಿಸುವಿಕೆ**

**ಉದಾಹರಣೆ**



ಬಸ್

ಮಗು : ಅಮ್ಮ, ಬಸ್ಸು, ಬಾ!

ತಾಯಿ : ಅದು ಬಸ್ ಅಲ್ಲಾ ವ್ಯಾನ್.

ಮಗು : ಅಮ್ಮ, ಸೈಕಲ್, ಕೆಂಪು

ತಾಯಿ : ನೋಡು ಸರಿಯಾಗಿ, ಅದು ಹಳದಿ ಬಣ್ಣದ್ದು

ಮಗು : ಅಟೋ

ತಾಯಿ : ಓ ಆಟೋ ಬಂತಾ, ಸರಿ ಆಟೋಲೆ ಮನೆಗೆ ಹೋಗೋಣ

## viii) ಅರ್ಥ ಸೂಚಿಸುವುದು

ಈ ವಿಧಾನದಲ್ಲಿ ನೀವೇ ನಿಮ್ಮ ಮಗುವಿಗೆ ಅರ್ಥವನ್ನು ಸೂಚಿಸಬೇಕು. ಹೀಗೆ ಮಾಡಿದರೆ ಮಗುವಿಗೆ ಸರಿಯಾದ ಉತ್ತರ ನೀಡಲು ಸಹಾಯವಾಗುತ್ತದೆ. ನಿಮ್ಮ ಮಗುವು ತಪ್ಪಾಗಿ ಉತ್ತರ ಹೇಳಿದಾಗ ಹಾಗೂ ಉತ್ತರ ಹೇಳಲು ಅಸಾಧ್ಯವಾದಾಗ ಈ ವಿಧಾನದ ಉಪಯೋಗ ಪಡೆಯಬಹುದು. ನೀವು ನಿಮ್ಮ ಮಗುವಿಗೆ ನೇರವಾಗಿ ಉತ್ತರ ಕೊಡದೆ ಯೋಚಿಸಲು ಸಮಯ ಅಥವಾ ಸೂಚನೆ ಕೊಡಿ. ಉತ್ತರಕ್ಕಾಗಿ ಹುಡುಕಾಡಲು ಉತ್ತೇಜಿಸಿ, ಉತ್ತರ ಪಡೆಯುವುದರಿಂದ ಮಗು ತನ್ನ ಪದಸಂಗ್ರಹವನ್ನು ಸೂಕ್ತವಾಗಿ ಬಳಸಲು ಕಲಿಸಿದಂತಾಗುತ್ತದೆ. ಈ ವಿಧಾನದಿಂದ ಹೊಸ ಹೊಸ ಪದಗಳನ್ನು ಕಲಿಸಿರಿ.

**ಉದಾಹರಣೆ**

ಬ್ರಷ್ ಮತ್ತು ಚಮಚದ ಚಿತ್ರ ತೋರಿಸಿ

ತಾಯಿ : ಇದು ಏನು?

ಮಗು : ಗೊತ್ತಿಲ್ಲ

ತಾಯಿ : ನೀನು ದಿನಾಲು ಹಲ್ಲನ್ನು ಯಾವುದರಲ್ಲಿ ಉಜ್ಜುತ್ತೀಯಾ?

ಮಗು : ಬ್ರಷ್

ತಾಯಿ : ಹಾಗೆಯೇ ಇದು, ತಿನ್ನಲು ಬಳಸುತ್ತೀವಿ ಅಲ್ವಾ? ಏನು ಇದು?

ಮಗು : ಹಾಂ! ಚಮಚ


ಚಮಚ

## ix) ಸುಳಿವು ನೀಡುವುದು

ಈ ವಿಧಾನದಿಂದ ಸರಿಯಾದ ಉತ್ತರ ಕೊಡುವ ಸಂಭವವನ್ನು ಹೆಚ್ಚಿಸಲಾಗುತ್ತದೆ. ಮೊದಲು ಪ್ರಶ್ನೆ ಕೇಳಿ ಉತ್ತರ ಸಿಗದಿದ್ದಾಗ ಮತ್ತೊಂದು ಸುಳಿವು ಕೊಡುವ ಪದ ಅಥವಾ ಪ್ರಶ್ನೆ, ವಾಕ್ಯ, ಉತ್ತರದ ಮೊದಲ ಅಕ್ಷರ ಇತ್ಯಾದಿ ನಿಮ್ಮ ಮಗುವಿಗೆ ನೀಡಿದರೆ, ಅದಕ್ಕೆ ಉತ್ತರ ಕೊಡಲು ಸಹಾಯವಾಗುತ್ತದೆ. ಇದಲ್ಲದೆ ನೀವು ಸಂಜ್ಞೆಗಳನ್ನು ತೋರಿಸಿ, ಇಲ್ಲವೇ ಬೇರೆ ರೀತಿಯ ಸಂಬಂಧಪಟ್ಟ ಶಬ್ದವನ್ನಾಗಲಿ ಮಾಡಿ ಸರಿಯಾದ ಉತ್ತರವನ್ನು ಪಡೆಯಿರಿ.


ಚೆಂಡು

**ಉದಾಹರಣೆ :**

ತಾಯಿ ಮಗುವಿಗೆ ಬಣ್ಣದ ಚೆಂಡಿನ ಚಿತ್ರ ತೋರಿಸುತ್ತಾ,

ತಾಯಿ : ಇದು ಏನು ?

ಮಗು : ಸುಮ್ಮನಿರುತ್ತದೆ.

ತಾಯಿ : ಸರಿಯಾಗಿ ನೋಡು "ಇದು ಬಾ..."

ಮಗು : ಬಾಲ್ !

## x. ಹಂತ ಹಂತವಾಗಿ ರೂಪಿಸುವುದು

ಕಷ್ಟಕರವಾದ ವಾಕ್ಯಗಳನ್ನು ಮಾದರಿ ವಿಧಾನದಿಂದ ಮತ್ತು ಅನುಕರಣೆಯಿಂದ ಕಲಿಸಲಾಗುವುದಿಲ್ಲ. ಆದ್ದರಿಂದ ವಾಕ್ಯಗಳನ್ನು ಸರಳಮಾಡಿ, ಮಗುವು ಹಂತ ಹಂತವಾಗಿ ಕಲಿಯುವಂತೆ ಮಾಡಿರಿ. ಹಂತ ಹಂತವಾಗಿ ಕಲಿತ ಭಾಗಗಳನ್ನು ಕೊನೆಯಲ್ಲಿ ಕೂಡಿಸಿ ಮಗುವಿನಿಂದ ಹೇಳಿಸಿ.

**ಉದಾಹರಣೆ :**

ನೀವು ಕಲಿಸಬೇಕಾದ ವಾಕ್ಯ "ಅಮ್ಮ ಚಪಾತಿ ಬೇಕು"




ತಾಯಿ : ಏನು ಬೇಕು ?

ಮಗು : ಚ.... ಚ.... ಚಪ್ಪಿ

ತಾಯಿ : ನಿಂಗೆ ಚಪಾತಿ ಬೇಕಾ ?

ಮಗು : ಚಪ್ಪ..... ಪಿ

ತಾಯಿ : ಹೇಳು ಚ... ಪಾ... ತಿ

ಮಗು : ಚ.... ಪಾ..... ಪಿ

ತಾಯಿ : ಅಲ್ಲ ಚಪಾ ... ತಿ

ಮಗು : ಚಪಾಪಿ

ತಾಯಿ : ಇನ್ನೊಮ್ಮೆ ಚಪಾತಿ

ಮಗು : ಚಪಾ..... ತಿ !

ತಾಯಿ : ಜಾಣ ! ಹೇಳು ಅಮ್ಮ ಚಪಾತಿ ಬೇಕು.

ಮಗು : ಅಮ್ಮ ಚಪಾತಿ ಬೇಕು.

ತಾಯಿ : ಇನ್ನೊಂದು ಸಲ ಹೇಳು 'ಅಮ್ಮ ಚಪಾತಿ ಬೇಕು'

ಮಗು : ಅಮ್ಮ ಚಪಾತಿ ಬೇಕು.

ತಾಯಿ : ಜಾಣ ! ತಗೋ

## xi) ಸೂಚನೆ ಮಾದರಿ ಕಡಿಮೆ ಮಾಡುವ ವಿಧಾನ

ಈ ವಿಧಾನದಲ್ಲಿ ಸರಿಯಾದ ಉತ್ತರ ಕಲಿಸಲು ತರಬೇತಿ ನೀಡಲಾಗುತ್ತದೆ. ಸುಳಿವುಗಳನ್ನು ಒಂದಾದನಂತರ

ಒಂದನ್ನು ತೆಗೆಯಲಾಗುತ್ತದೆ. ಇದನ್ನು ಪಾಲಿಸುವುದರೊಂದಿಗೆ ನೀವು ಮಾದರಿಯನ್ನು ಸಹ ಕಡಿಮೆ ಮಾಡುತ್ತಾ ಹೋಗಿ. ಧ್ವನಿಯನ್ನು ಸಹ ಎತ್ತರದಿಂದ ಕಡಿಮೆ ಮಾಡಿ. ಕೊನೆಯಲ್ಲಿ ಯಾವುದೇ ಸುಳಿವಿಲ್ಲದೆಯೇ ನಿಮ್ಮ ಮಗು ಕೇಳಿದ ಪ್ರಶ್ನೆಗೆ ಉತ್ತರ ನೀಡಬೇಕು.

**ಉದಾಹರಣೆ :**

ತಾಯಿಯು ಮಗುವಿಗೆ ಬೆಕ್ಕಿನ ಚಿತ್ರ, ಗೊಂಬೆಯನ್ನು ತೋರಿಸುತ್ತಾ, ಅದು ಮಾಡುವ ಶಬ್ದ ಮಾಡಿ ತೋರಿಸಿ:

ತಾಯಿ : 'ಇದು ಬೆಕ್ಕು'

ಮಗು : ಬೆಕ್ಕು

ತಾಯಿ : ಬೆಕ್ಕಿನ ಬೊಂಬೆಯನ್ನು ಮರೆಸಿಟ್ಟು 'ಇದು ಏನು ?'

ಎಂದು ಬೆಕ್ಕಿನ ಚಿತ್ರಕ್ಕೆ ಕೈತೋರಿಸುತ್ತಾಳೆ.

ಮಗು : ಬೆಕ್ಕು



ಬೆಕ್ಕು

ಮುಂದೆ ತಾಯಿಯು ಒಂದೊಂದಾಗಿ ಎಲ್ಲಾ ಸೂಚನೆ ತೆಗೆದುಬಿಡುತ್ತಾಳೆ.

ಕೊನೆಯಲ್ಲಿ ಮಗುವಿಗೆ ಚಿತ್ರ ತೋರಿಸಿದೊಡನೆ ಮಗುವು ಚಿತ್ರದ ಹೆಸರು ಹೇಳಬೇಕು.

## xii) ವರ್ಗೀಕರಣ

ಪದಗಳ ನಡುವಿನ ಸಂಬಂಧವನ್ನು ತಿಳಿಸಿಕೊಡಲು ಈ ವಿಧಾನದ ಉಪಯೋಗ ಮಾಡಿರಿ. ಈ ವಿಧಾನವನ್ನು ತರಬೇತಿಯಲ್ಲಿ ಅಳವಡಿಸಿಕೊಳ್ಳುವ ಮೊದಲು ಮಗುವಿಗೆ ಪದಗಳ ಅರ್ಥಗಳನ್ನು ಕಲಿಸಿರಿ. ಈ ವಿಧಾನದಿಂದ ನೀವು ಮಗುವಿಗೆ ಅರ್ಥಗಳನ್ನು ಹಾಗೂ ವಾಕ್ಯದ ವಿವಿಧ ಭಾಗಗಳನ್ನು ಸುಲಭವಾಗಿ ಕಲಿಸಬಹುದು.

**ಉದಾಹರಣೆ :**

ತಾಯಿ : ತಿನ್ನುವ ವಸ್ತುಗಳ ಹೆಸರು ಹೇಳು

ಮಗು : ದೋಸೆ, ಬಿಸ್ಕತ್, ಆಪಲ್

ತಾಯಿ : ಯಾವುದನ್ನು ತಿನ್ನಲಿಕ್ಕಾಗಲ್ಲ?

ಮಗು : ಕಲ್ಲು, ಕುರ್ಚಿ

ತಾಯಿ : ಸರಿ, ಪೇಪರ್ ತಿನ್ನಕ್ಕಾಗತ್ತಾ ?

ಮಗು : ಇಲ್ಲ. (ಯೋಚನೆ ಮಾಡುತ್ತದೆ)

ಮಗು : ಊ, ಹೂ, ಗೊತ್ತಿಲ್ಲ.




ವರ್ಗೀಕರಣ: ತಿನ್ನಲು ಯೋಗ್ಯವಾದ ವಸ್ತುಗಳು

ತಾಯಿ : ಹೌದಾ, ಇದೆಲ್ಲ ನಾವು ಮಾಡುವ ಕೆಲಸಗಳು. ಇಂತಹ ಕೆಲವು ಕೆಲಸಗಳನ್ನು ಹೇಳ್ತೀಯಾ?

ಮಗು : ಊಟ ಮಾಡು, ಓಡು, ಬರಿ

ತಾಯಿ : ಜಾಣ!

## xiii. ವಾಕ್ಯ ಪೂರ್ಣಗೊಳಿಸುವುದು

ಈ ವಿಧಾನದಲ್ಲಿ ನೀವು ಅಪೂರ್ಣ ವಾಕ್ಯವೊಂದನ್ನು ಮಗುವಿಗೆ ನೀಡಬೇಕು. ಮಗುವು ಸರಿಯಾದ ಪದವನ್ನು ಹಾಕಿ, ಆ ವಾಕ್ಯವನ್ನು ಪೂರ್ಣಗೊಳಿಸಬೇಕು. ಈ ವಿಧಾನದಿಂದ ಮಗುವಿಗೆ ಆ ಭಾಷೆಯ ವಿವಿಧ ಭಾಗಗಳನ್ನು ಸುಲಭವಾಗಿ ಕಲಿಸಬಹುದು. ಈ ವಿಧಾನದ ಇನ್ನೊಂದು ಬದಲಾವಣೆಯೆಂದರೆ, ಮಗುವು ತನಗೆ ಬರುವ ವಾಕ್ಯಗಳನ್ನು, ಕಲಿಯುತ್ತಿರುವ ಹೊಸ ವಾಕ್ಯಗಳನ್ನು ಅಪೂರ್ಣವಾಗಿ ಹೇಳಿ, ತಾಯಿಗೆ, ಆ ವಾಕ್ಯವನ್ನು ಪೂರ್ಣಮಾಡಲು ಬಿಡುವುದು, ಇಂತಹ ಬದಲಾವಣೆಗಳನ್ನು ಮಕ್ಕಳು ಬಹಳಷ್ಟು ಮೆಚ್ಚುತ್ತಾರೆ.

**ಉದಾಹರಣೆ :**

ತಾಯಿ : ಹುಡುಗರು ಚೆಂಡಿನಿಂದ ........

ಮಗು : ಆಡುತ್ತಿದ್ದಾರೆ.

ತಾಯಿ : ಹುಡುಗಿಯರು .......... ಆಡುತ್ತಿದ್ದಾರೆ.

ಮಗು : ಹಗ್ಗ

ತಾಯಿ : ಆ ತಾತ ಬೆಂಚಿನ ಮೇಲೆ ಏನ್ ಮಾಡ್ತಾ ಇದ್ದಾರೆ?

ಮಗು : ಕುಳಿತಿದ್ದಾರೆ.

ತಾಯಿ : ಹೇಳು, ನಾವು ಯಾವುದರ ಮೇಲೆ ಕೂತ್ಕೊಳ್ಳೋಣ?

ಮಗು : ಹುಲ್ಲು

ತಾಯಿ : ಸರಿ, ಹುಲ್ಲಿನ ಮೇಲೆ ಕೂರೋಣ.



ಆಟೋಟಗಳ ಮಧ್ಯೆ ವಿಷಯಗಳನ್ನು ಕಲಿಸಿ

## xiv) ತಪ್ಪುಗಳನ್ನು ಕಂಡುಹಿಡಿಯುವುದು

ಈ ವಿಧಾನದಲ್ಲಿ, ನೀವು ನಿಮ್ಮ ಮಗುವಿಗೆ ವಾಕ್ಯಗಳನ್ನು ನೀಡಿ. ಮಗುವು ಆ ವಾಕ್ಯಗಳಲ್ಲಿರುವ ಸರಿ ತಪ್ಪುಗಳನ್ನು ಕಂಡುಹಿಡಿಯಬೇಕು. ತಪ್ಪು ವಾಕ್ಯಗಳನ್ನು ಸರಿಪಡಿಸಬೇಕು. ಈ ವಿಧಾನದಲ್ಲಿ ನೀವು ಎರಡು ಅಂಶಗಳನ್ನು ಗಮನದಲ್ಲಿಡಬೇಕು.

ಅ. ವಾಕ್ಯದ ಅರ್ಥ

ಆ. ವಾಕ್ಯ ರಚನೆ

ಮಗುವಿಗೆ ಯಾವಾಗಲೂ ಸರಿಯಾದ ವಾಕ್ಯದಲ್ಲಿ ಮಾತಾಡಲು ಸಾಧ್ಯವಾಗದಿದ್ದರೂ, ಯಾವ ವಾಕ್ಯ ಸರಿ ಹಾಗೂ ಯಾವುದು ತಪ್ಪು ಎಂಬ ಕಲ್ಪನೆಯಿರುತ್ತದೆ. ನೀವು ಮಕ್ಕಳ ಈ ಸಾಮರ್ಥ್ಯದ ಉಪಯೋಗ ಪಡೆದರೆ ಅವರ ಭಾಷೆಯ ಮಟ್ಟ ಗೊತ್ತಾಗುತ್ತದೆ. ಈ ವಿಧಾನದಿಂದ ಮಕ್ಕಳ ಮಾತನ್ನು ತಿದ್ದಬಹುದು, ಹಾಗೂ ಭಾಷೆಯ ನಿಯಮಗಳನ್ನು ಉತ್ತಮಪಡಿಸಬಹುದು.

**ಉದಾಹರಣೆ :**

ತಾಯಿ : 'ನಾನು ನಾಳೆ ಸಿಟಿಗೆ ಹೋಗಿದ್ದೆ' – ಇದು ಸರಿಯಾ?

ಮಗು : ಉಹೂಂ.

ತಾಯಿ : ಮತ್ತೆ ? ನೀನು ಸರಿಮಾಡು?

ಮಗು : ನಿನ್ನೆ

ತಾಯಿ : ಜಾಣ!!

## xv) ಪ್ರಶ್ನಿಸುವುದು

ಮಕ್ಕಳಿಂದ ಉತ್ತರಪಡೆಯುವ ಉತ್ತಮ ಮಾರ್ಗ ಪ್ರಶ್ನಿಸುವುದು, ಪ್ರಶ್ನೆಗಳಲ್ಲಿ ಮೂರು ವಿಧ:

**ಅ. ಹೌದು/ಇಲ್ಲ ಎಂಬ ಉತ್ತರ ಪಡೆಯುವ ಪ್ರಶ್ನೆಗಳು.**

**ಉದಾಹರಣೆ:** ನಿನ್ನ ಹೆಸರು ದಿಲೀಪನಾ?

**ಆ. ಹೆಸರಿಸುವ ಉತ್ತರ ಪಡೆಯುವ ಪ್ರಶ್ನೆಗಳು**

**ಉದಾಹರಣೆ:** ಇದು ಯಾವ ಬಣ್ಣ?

**ಇ. ಮಿತಿ/ಅಥವಾ ಉತ್ತರಕ್ಕೆ ತಡೆ ಹಿಡಿಯುವ ಪ್ರಶ್ನೆಗಳು.**

**ಉದಾಹರಣೆ:** ನಿನ್ನೆ ಸಾಯಂಕಾಲ ಏನೇನು ಮಾಡಿದೆ?

ಭಾಷೆಯನ್ನು ಕಲಿಸಲು ಮೂರನೆಯ ತರಹದ ಪ್ರಶ್ನೆ ಬಹಳ ಮುಖ್ಯ. ಇನ್ನೂ ಸರಿಯಾಗಿ ಭಾಷೆ ಹಾಗೂ ಮಾತು ಕಲಿಯುವ ಮಕ್ಕಳಿಗೆ ಒಂದು ಮತ್ತು ಎರಡನೆಯ ತರಹದ ಪ್ರಶ್ನೆಗಳನ್ನು ಉಪಯೋಗಿಸಬಹುದು. ಮೂರನೆ ತರಹದ ಪ್ರಶ್ನೆಗಳಿಂದ ಮಕ್ಕಳಿಗೆ ಏನು ಗೊತ್ತಿದೆ ಎಂಬುದರ ಅರಿವು ನಮಗಾಗಬಹುದು. ಈ ತರಹದ ಪ್ರಶ್ನೆಗಳಿಂದ ಭಾಷೆಯ ಪ್ರಗತಿಯನ್ನು ಸಾಧಿಸಬಹುದು.

**ಉದಾಹರಣೆ**

ತಾಯಿ : ಹೋದ ಶನಿವಾರ ಎಲ್ಲಿಗೆ ಹೋಗಿದ್ದೆ ?

ಮಗು : ಊರಿಗೆ

ತಾಯಿ : ಊರಿಗೆ ಹೇಗೆ ಹೋದೆ ?

ಮಗು : ಬಸ್ಸು, ಗಾಡಿ

ತಾಯಿ : ಊರಿನಲ್ಲಿ ಯಾರು ಯಾರು ಇದ್ದಾರೆ ?

ಮಗು : ಅಜ್ಜಿ, ತಾತ, ಚಿಕ್ಕಪ್ಪ, ಚಿಕ್ಕಮ್ಮ, ರಂಜಿತ

ತಾಯಿ : ಊರಿನಲ್ಲಿ ಏನು ಮಾಡಿದೆ ?

ಮಗು : ಹೊಲಕ್ಕೆ ಹೋದೆ, ಆಟ ಆಡಿದೆ, ನೀರಿನಲ್ಲಿ ಆಡಿದೆ, ಪಾಯಸ ತಿಂದೆ.

## xvi) ವಾಕ್ಯ ಪುನಃ ರಚಿಸುವುದು

ಪದಗಳನ್ನು ಸರಿಯಾಗಿ ಜೋಡಿಸಿ, ನಿಮ್ಮ ಮಗುವಿನಿಂದ ವಾಕ್ಯಗಳನ್ನು ಮಾಡಿಸಿರಿ. ನಿಮ್ಮ ಮಗುವಿಗೆ ಯೋಚಿಸಲು ಸಮಯನೀಡಿ. ಸರಿಯಾದ ವಾಕ್ಯ ಮಾಡಲು ಸಹಾಯ ಮಾಡಿ. ಅರ್ಥಬದ್ಧವಾದ ವಾಕ್ಯ ಮಾಡಿದಾಗ ಉತ್ತೇಜಿಸಿ. ಈ ವಿಧಾನವನ್ನು ಪುಟ್ಟ ವಾಕ್ಯಗಳನ್ನು ರಚಿಸುತ್ತಿರುವ ಮಕ್ಕಳೊಂದಿಗೆ ಉಪಯೋಗಿಸಬಹುದು. ಈ ವಿಧಾನವು ಮಕ್ಕಳಿಗೆ, ಒಂದು ವಾಕ್ಯದಲ್ಲಿರುವ ಪದಗಳ ಪರಸ್ಪರ ಸಂಬಂಧ, ಒಂದೊಂದು ಪದಗಳ ಪ್ರಾಮುಖ್ಯತೆ ಹಾಗೂ ಪದಗಳ ಜೋಡಣೆಯನ್ನು ತಿಳಿಸಿಕೊಡುತ್ತದೆ.

**ಉದಾಹರಣೆ :**

ತಾಯಿ : ಈ ಚಿತ್ರ ನೋಡು. ಇಲ್ಲಿ ಏನೇನು ಕಾಣುತ್ತೆ ನೋಡು. ಬಸ್, ಸೈಕಲ್, ರಸ್ತೆ ...... ಇವೆಲ್ಲ ಈ ಚಿತ್ರಕ್ಕೆ ಸಂಬಂಧಪಟ್ಟದ್ದು. ಇವುಗಳನ್ನೆಲ್ಲಾ ಕೂಡಿಸಿ ನನಗೊಂದು ವಾಕ್ಯ ಹೇಳು. ಇನ್ನೊಂದು ಸಲ ಈ ಚಿತ್ರ ನೋಡು.

**ಉದಾಹರಣೆ :**

ಜಾಣ ಕಾಗೆಯ ಕಥೆಯನ್ನು ಮಗುವಿಗೆ ಹೇಳಿದ ನಂತರ,

ತಾಯಿ : ಕಥೆ ಅರ್ಥ ಆಯ್ತಾ? ಕಾಗೆಗೆ ಬಾಯಾರಿಕೆಯಾಗಿದ್ದಾಗ ಅದಕ್ಕೆ ಏನ್ ಕಾಣಿಸ್ತು?


ಕಥೆ ಹೇಳುವುದರ ಮೂಲಕ ಭಾಷಾಸಾಮರ್ಥ್ಯವನ್ನು ಬೆಳೆಸಬಹುದು

ಮಗು : ನೀರು

ತಾಯಿ : ನೀರೆಲ್ಲಿತ್ತು ?

ಮಗು : ಮಡಿಕೆ

ತಾಯಿ : ಕಾಗೆಗೆ ನೀರು ಏಕೆ ಸಿಗಲಿಲ್ಲ ?

ಮಗು : ನೀರು ಕೆಳಗೆ

ತಾಯಿ : ಸರಿ, ಕಾಗೆ ಆಮೇಲೆ ಏನ್ ಮಾಡ್ತು?

ಮಗು : ಕಲ್ಹಾಕ್ತು

ತಾಯಿ : ನೀರ್ ಏನಾಯ್ತು?

ಮಗು : ಮೇಲೆ ಬಂತು

ತಾಯಿ : ಕಾಗೆ ನೀರನ್ನು ಕುಡಿಯಿತು. ಕಾಗೆಗೆ ಆಮೇಲೆ ಏನ್ ಅನ್ನಿಸ್ತು ?

ಮಗು : ಸಂತೋಷ ಆಯ್ತು

ತಾಯಿ : ಆಮೇಲೆ ಕಾಗೆ ಎಲ್ಲಿ ಹಾರಿ ಹೋಯ್ತು ?

ಮಗು : ಮರದ ಹತ್ತಿರ

ತಾಯಿ : ಜಾಣ, ಕಾಗೆ ಹಾರಿ ಮರದ ಮೇಲೆ ಕೂತ್‌ಕೊಂಡ್ತು

# ಸ್ವ–ಅಧ್ಯಯನ

1. ಮನೆಯಲ್ಲಿ ಯಾರಿಗಾದರೂ ಕಿವಿ ಕೇಳಿಸುವ ಅಥವಾ ಮಾತಿನ ತೊಂದರೆ ಇದೆಯೇ?
2. ಹುಟ್ಟುವಾಗ ಮಗು ಅಳುತ್ತಿತ್ತೇ, ಇಲ್ಲವೇ?
3. ಹುಟ್ಟಿದ ಮೇಲೆ ಮಗುವಿಗೆ ಯಾವುದೇ ತರಹದ ತೊಂದರೆ (ಇನ್‌ಫ್ಲೆಕ್ಷನ್, ಪೆಟ್ಟು ಬೀಳುವುದು) ಆಗಿತ್ತೇ?

## ಧ್ವನಿಯ ತೊಂದರೆ

1. ಮಗುವು ತುಂಬಾ ಮೆತ್ತಗೆ/ತುಂಬಾ ಜೋರಾಗಿ ಮಾತನಾಡುತ್ತದೆಯೇ?
2. ಮಗುವಿನ ಧ್ವನಿ ಕರ್ಕಶವಾಗಿ ಕೇಳುತ್ತದೆಯೇ?
3. ಮಗುವಿಗೆ ನುಂಗಲು ತೊಂದರೆ ಇದೆಯೇ?
4. ಸಮ ವಯಸ್ಸಿನ ಮಕ್ಕಳಿಗಿಂತ ಮಗುವಿನ ಧ್ವನಿ ಹೊರತಾಗಿದೆಯೇ?

## ಉಚ್ಚಾರಣೆ ತೊಂದರೆ

1. ತನ್ನ ಭಾಷೆಯ ಶಬ್ಧಗಳನ್ನು ಆರು ವರ್ಷವಾದರೂ ಹೇಳಲು ಬರುವುದಿಲ್ಲವೇ?
2. ಮಗುವು ಮಾತನಾಡುವುದು ಬೇರೆಯವರಿಗೆ ಅರ್ಥವಾಗುವುದಿಲ್ಲವೇ?
3. ಮಗುವು ಸೀಳು ಅಂಗಳು ಅಥವ ಸೀಳು ತುಟಿಯ ಶಸ್ತ್ರ ಚಿಕಿತ್ಸೆಗೆ ಒಳಗಾಗಿದೆಯೇ?

## ತೊದಲು ಮಾತು

1. ಮಗುವು ತುಂಬಾ ಬೇಗ ಮಾತನಾಡುತ್ತದೆಯೇ?
2. ಮಗುವಿನ ಮಾತು ಅರ್ಥವಾಗುವುದಿಲ್ಲವೇ?
3. ಮಗುವು ತೊದಲುತ್ತಾ, ಮತ್ತೆ–ಮತ್ತೆ ಹೇಳುವುದು, ಎಳೆಯುವುದು, ನಿಲ್ಲಿಸಿ ಮಾತನಾಡುವುದು ಮಾಡುತ್ತದೆಯೇ?

## ಕಲಿಯುವ/ಓದು–ಬರೆಯುವ ತೊಂದರೆ

1. ಎಡ–ಬಲ ತೋರಿಸಲು ಕಷ್ಟಪಡುತ್ತದೆಯೇ?
2. ಲೇಖನಿಯನ್ನು ತಪ್ಪಾಗಿ/ಕಷ್ಟಪಟ್ಟು ಹಿಡಿಯುತ್ತದೆಯೇ?
3. 'ಒಂದರ ನಂತರ ಮತ್ತೊಂದು' ಅಂತಹ ಕೆಲಸಗಳನ್ನು ಮಾಡಲು ಕಷ್ಟಪಡುತ್ತದೆಯೇ?
4. ಓದುವುದರಲ್ಲಿ ಅಥವ ಬರೆಯುವುದರಲ್ಲಿ ತಿರುಗಿಸಿ ಬರೆಯುವ/ಓದುವ ಅಭ್ಯಾಸವಿದೆಯೇ? (ಉದಾ : 'ಮ' ಗೆ 'ವ'/'ಲ' ಗೆ 'ರ'
5. ಓದುವಾಗ ಸರಿಯಾಗಿ ಸಾಲು–ಸಾಲಾಗಿ ಓದುವುದಿಲ್ಲವೇ?

6. ನಿಲುಗಡೆ ರಹಿತ ಸಲಹೆ ಹಾಗು ಪರಿಶೀಲನೆಯ ನಂತರವೂ ಈ ತೊಂದರೆ ಮುಂದುವರೆಯುತ್ತಿದೆಯೇ?

**ನಡವಳಿಕೆ ಹಾಗು ಮನಸ್ಥಿತಿಯ ತೊಂದರೆಗಳು**

1. ಮಗುವಿನ ನಡತೆ ಕೆಲವು ಸಂದರ್ಭಗಳಲ್ಲಿ ಅಸಹಜ ಆಗಿದೆಯೆ?
2. ಮಗುವಿನ ನಡತೆಯೇನಾದರೂ ಬೇರೆಯವರಿಗೆ ತೊಂದರೆಯಾಗುವಂತದ್ದೇ?
3. ಮಗು ಶಾಲೆಯಲ್ಲಿ ಆಲಸಿಯಾಗಿರುತ್ತದೆಯೇ?
4. ಕಾರಣರಹಿತವಾಗಿ ಜಗಳವಾಡುತ್ತಿರುತ್ತದೆಯೇ?

**ವಿಶಿಷ್ಟ ಭಾಷಾ ತೊಂದರೆ**

1. ಮಗು ತಾನು ಮಾತನಾಡುವಾಗ ಹಾಗೂ ಭಾಷೆಯನ್ನು ಉಪಯೋಗಿಸುವುದನ್ನು ತಿಳಿದುಕೊಳ್ಳಲು ಹೆಚ್ಚು ಸಮಯ ತೆಗೆದುಕೊಳ್ಳುತ್ತದೆಯೇ?
2. ಮಗುವಿಗೆ ಭಾಷೆಯ ಅರ್ಥವನ್ನು ತಿಳಿದುಕೊಳ್ಳುವಲ್ಲಿ ಕೊರತೆಯಿದೆಯೇ?
3. ಶಬ್ಧ ಇರುವ ಜಾಗದಲ್ಲಿ ಮಗುವಿಗೆ ಅರ್ಥವಾಗುವುದು ಕಷ್ಟವಾಗುತ್ತದೆಯೇ?
4. ಭಾಷೆಯ ವ್ಯಾಕರಣದಲ್ಲಿ ಮಗುವಿಗೆ ತೊಂದರೆ ಇದೆಯೇ?
5. ಉಚ್ಛಾರಣೆ ಮಾಡುವಾಗ ತಪ್ಪು ತಪ್ಪಾಗಿ ಹೇಳುತ್ತದೆಯೇ?

**ಮೆದುಳಿನ ನಿಸ್ಸತ್ವತೆ**

1. ಮಗು ತನ್ನ ಚಲನೆಯನ್ನು ಯಾರ ಸಹಾಯವಿಲ್ಲದೇ ಮಾಡುತ್ತದೆಯೇ?
2. ಮಗು ಸರಿಯಾಗಿ ಚಲಿಸುತ್ತದೆಯೇ?
3. ಮಗುವಿಗೆ ಮಾತನಾಡುವ ಕಷ್ಟದ ಜೊತೆಗೆ ಸ್ನಾಯುಗಳ ದೌರ್ಬಲ್ಯತೆ ಇದೆಯೇ?
4. ಮಗುವಿಗೆ ಅಪಸ್ಮಾರ ಬಂದಿತ್ತೇ/ಬರುತ್ತದೆಯೇ?

**ಬುದ್ಧಿ ಮಾಂದ್ಯತೆ**

1. ಮಗು ಕುಳಿತುಕೊಳ್ಳುವ, ನಿಲ್ಲುವ, ನಡೆಯುವ ಮತ್ತು ಮಾತನಾಡುವ ಹಂತವನ್ನು ತಲುಪುವುದರಲ್ಲಿ ನಿಧಾನವಾಗಿದೆಯೇ?
2. ಮಗು ಸಪ್ಪಗಿದೆಯೇ? ವಿಷಯಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ತೊಂದರೆಪಡುತ್ತದೆಯೆ?
3. ಮಗುವಿಗೆ ಚಾಲನೆಯಲ್ಲಿ, ಅಗಿಯುವುದರಲ್ಲಿ, ಚೀಪುವುದರಲ್ಲಿ ಕಷ್ಟವಿದೆಯೇ ?
4. ಮಗು ಜೊಲ್ಲು ಸುರಿಸುತ್ತದೆಯೆ?

**ತಂತನತೆ ಹಾಗು ಸಂಬಂಧಿಸಿದ ತೊಂದರೆಗಳು**

1. ಮಗುವು ಮಾತನಾಡುವಾಗ ದೃಷ್ಟಿಯನ್ನು ನೋಡುತ್ತದೆಯೇ?
2. ಮಗು ಒಬ್ಬಂಟಿಯಾಗಿರಲು ಇಷ್ಟಪಡುತತ್ತದೆಯೇ?
3. ಮಗುವಿನ ನಗುವಿನ ಶೈಲಿಯು ವಿಚಿತ್ರವಾಗಿದೆಯೇ?

4. ಮಗುವು ಸುಲಭವಾಗಿ ನೋವನ್ನು ತಡೆದುಕೊಳ್ಳುತ್ತದೆಯೇ?
5. ಮಗುವಿನ ದಿನಚರಿ ಬದಲಾಯಿಸಿದರೆ ಕೋಪ ಬರುತ್ತದೆಯೇ?
6. ಮಗುವಿನ ಸಾಮಾಜಿಕ ಚಟುವಟಿಕೆಗಳಲ್ಲಿ ಕೊರತೆ ಇದೆಯೇ?

**ಅತಿಯಾದ ಚಟುವಟಿಕೆ**

1. ಒಂದೇ ಸ್ಥಳದಲ್ಲಿ ಕುಳಿತುಕೊಳ್ಳಲು ಕಷ್ಟಪಡುತ್ತಾನೆಯೇ?
2. ಕುಳಿತಿದ್ದಾಗ ಕೈ–ಕಾಲಿಂದ ಚೇಷ್ಟೆ ಮಾಡುತ್ತಾನೆಯೇ?
3. ಶಾಂತವಾಗಿ ಆಟ ಆಡಲು ಕಷ್ಟಪಡುತ್ತಾನೆಯೇ?
4. ಅತಿಯಾಗಿ ಮಾತನಾಡುತ್ತಿರುತ್ತಾನೆಯೇ?
5. ಕೆಲಸದಲ್ಲಿ ಹಾಗು ಆಟದಲ್ಲಿ ಗಮನವಿಟ್ಟು ಆಡುತ್ತಾನೆಯೇ?

**ಭಾಷಾ ತೊಂದರೆ (ಯುವಜನರಲ್ಲಿ)**

1. ವೈದ್ಯಕೀಯ ಇತಿಹಾಸವೇನಾದರೂ ಇದೆಯೇ (ಹಳೆಯ ತೊಂದರೆಗಳು, ಕಾಯಿಲೆಗಳು ಇತ್ಯಾದಿ)?
2. ಮನಬಿಚ್ಚಿ ಮಾತನಾಡುವಲ್ಲೇನಾದರೂ ತೊಂದರೆಯಿದೆಯೇ?
3. ಮಾತನಾಡುತ್ತಿರುವುದನ್ನು ಅರ್ಥಮಾಡಿಕೊಳ್ಳಲು ಆಗುವುದಿಲ್ಲವೇ?
4. ಮನಸ್ಸಿಗೆ ಬಂದದ್ದೆನಾದರೂ ಮಾತನಾಡುವ ಅಭ್ಯಾಸವಿದೆಯೇ?
5. ಯಾವಾಗಲೂ ಸಪ್ಪಗಿರುವುದು ಕಂಡುಬರುತ್ತದೆಯೇ?

## ಅಭ್ಯಾಸ

**ಟ ಶಬ್ದ**

| | | |
|---|---|---|
| ಟಗರು | ಕಟ್ಟಡ | ಆಟ |
| ಟಾಮಿ | ಆಟಿಗೆ | ನೋಟ |
| ಟಿ.ವಿ. | ಇಟ್ಟಿಗೆ | ಕಟ್ಟೆ |
| ಟ್ಯೂಬ್ | ಲಟ್ಟಣಿಗೆ | ಬಟ್ಟೆ |
| ಟೇಬಲ್ | ಲಾಟರಿ | ತೋಟ |
| ಟೆನ್ನಿಸ್ | ಪಟೌಡಿ | ಓಟ |
| ಟೈಗರ್, | ಪೀಟರ್ | ಬೋಟು |
| ಟೀಚರ್, | ಪಾಟೀಲ | ಮೋಟು |
| ಟಿಕೆಟ್ | ಪಟೇಲ | ನಾಟಿ |
| ಟಿಂಬರ್ | ಪಿಟೀಲು | ಸಿಟಿ |

**ಡ ಶಬ್ದ**

| | | |
|---|---|---|
| ಡಬ್ಬ | ಕೊಡವ | ಪಡೆ |
| ಡೋಲು | ದಿಢೀರ್ | ನಡೆ |
| ಡಾಬು | ಕಡಲು | ಕಾಡು |
| ಡಮರುಗ | ಗಡಿಯಾರ | ಕರಡಿ |
| ಡೇವಿಡ್ | ಪಿಡುಗು | ಜಡೆ |
| ಡಿಕ್ಕಿ | ನಡುಗು | ಲಾಡು |
| ಡೊಂಕು | ನಡುವೆ | ಪಕೋಡ |
| ಡೈರಿ | ಕಡತ | ದಾಡಿ |
| ಡೌಲು | ಬಂಡಾಯ | ಮೊಂಡು |
| ಡೆಟಾಲ್ | ಬಡವ | ಕವಡೆ |

# ಅಭ್ಯಾಸಗಳು (1–6)

### ಭಾಷೆಯ ದೋಷಗಳು

1. ಭಾಷಾ ದೋಷ ಎಂದು ಯಾವಾಗ ಕರೆಯುತ್ತಾರೆ?
2. ಭಾಷಾ ದೋಷವನ್ನು ಎಷ್ಟು ಬಗೆಯಾಗಿ ವಿಂಗಡಿಸಬಹುದು?
3. ಮಕ್ಕಳಲ್ಲಿ ಕಂಡುಬರುವ ಭಾಷಾ ದೋಷಗಳ ಕಾರಣಗಳು ಯಾವುವು?
4. ಭಾಷಾ ಕೌಶಲ್ಯವನ್ನು ಮೌಲ್ಯಮಾಪನ (ಅಳತೆಮಾಡುವುದು) ಮಾಡುವುದು ಹೇಗೆ?
5. ವಯಸ್ಕರಲ್ಲಿ ಕಂಡುಬರುವ ಭಾಷಾ ದೋಷಗಳು ಯಾವುವು?
6. ಭಾಷಾ ದೋಷಗಳ ಗುಣಲಕ್ಷಣಗಳನ್ನು ತಿಳಿಯಲು ಯಾವ ಅಂಶಗಳನ್ನು ಪರೀಕ್ಷಿಸಲಾಗುತ್ತದೆ?
7. ನಿಧಾನಗತಿಯ ಭಾಷಾ ಬೆಳವಣಿಗೆ ಎಂದರೇನು?
8. ಯಾವ ಸ್ಥಿತಿಗಳಲ್ಲಿ ನಿಧಾನಗತಿಯ ಭಾಷಾ ಬೆಳವಣಿಗೆ ಉಂಟಾಗುವ ಸಾಧ್ಯತೆ ಇದೆ?
9. ಬೌದ್ಧಿಕ ಶಕ್ತಿ ಕಡಿಮೆಯಾದಾಗ ಉಂಟಾಗುವ ಸ್ಥಿತಿ ಯಾವುದು?
10. ಭಾಷಾ ಗ್ರಹಿಸುವಿಕೆ ಮತ್ತು ಭಾಷಾ ಬಳಸುವಿಕೆ ಎಂದರೇನು?
11. ತಂತನತೆ ಎಂದರೇನು?
12. ತಂತನತೆ ಇರುವ ಮಕ್ಕಳಲ್ಲಿ ಭಾಷಾ ಬೆಳವಣಿಗೆ ಹೇಗಿರುತ್ತದೆ?
13. ಶ್ರವಣದೋಷ ಎಂದರೇನು?
14. ಶ್ರವಣದೋಷದಿಂದ ಉಂಟಾಗುವ ಮಾತು ಮತ್ತು ಭಾಷೆಯ ದೋಷಗಳು ಯಾವುವು?

### ಪ್ರಶ್ನಾವಳಿಗಳು

1. ಮಾತು ಮತ್ತು ಭಾಷೆ ಮಾನವನ ವಿಶಿಷ್ಟತೆ ಹೇಗೆ?
2. ಸಂವಹನ ಕ್ರಿಯೆಗೆ ಸಹಾಯ ಮಾಡುವ ಅಂಗಗಳು ಯಾವುವು?
3. ಸಂವಹನ–ಭಾಷೆ–ಮಾತು ಇವುಗಳಿಗೆ ಇರುವ ವ್ಯತ್ಯಾಸವೇನು?
   (1) ಸಂವಹನ ಎಂದರೇನು?
   (2) ಭಾಷೆ ಎಂದರೇನು?
   (3) ಭಾಷೆಯನ್ನು ವ್ಯಕ್ತಪಡಿಸುವ ಮಾಧ್ಯಮಗಳು ಯಾವುವು?
   (4) ಮಾತು ಎಂದರೇನು?
   (5) ಭಾಷೆ ಮತ್ತು ಮಾತು ಒಂದು ಸಮಾಜದ ರೀತಿನೀತಿಗಳಿಗೆ ಒಳಪಟ್ಟಿರುತ್ತದೆಯೆ?
4. ಭಾಷೆಯ ಬೆಳವಣಿಗೆ ಮಗುವಿನ ಜನನ ಕಾಲದಿಂದಲೂ ಉಂಟಾಗುತ್ತದೆಯೆ?
5. ಶಿಶುವಿನ ಭಾಷೆಯ ಬೆಳವಣಿಗೆಗೆ ಪೂರಕವಾಗಿರುವ ಅಂಶಗಳು ಯಾವುವು?
6. ಮನುಷ್ಯನ ದೇಹರಚನೆಯಲ್ಲಿ ಮಾತನಾಡಲು ಸಹಾಯಮಾಡುವ ಮುಖ್ಯ ಅಂಗಗಳು ಯಾವುವು?

7. ಮಾತು ಮತ್ತು ಭಾಷೆಯ ಬೆಳವಣಿಗೆಯ ಹಂತಗಳಾವುವು?
8. ಮಾತು ಮತ್ತು ಭಾಷೆಯ ಬೆಳವಣಿಗೆಯಲ್ಲಿ ದೋಷವುಂಟಾಗುವ ಸಾಧ್ಯತೆ ಇದೆಯೆ?
9. ಮಾತು ಮತ್ತು ಭಾಷೆಯ ದೋಷಗಳು ಯಾವುವು?
   (1) ಭಾಷೆಯಲ್ಲಿರುವ ದೋಷಗಳ ವಿಂಗಡನೆ ಹೇಗೆ?
   (2) ಮಾತಿನಲ್ಲಿರುವ ದೋಷಗಳ ವಿಂಗಡನೆ ಹೇಗೆ?
10. ನಮ್ಮ ದೇಶದಲ್ಲಿ ಅಂಕಿ ಅಂಶಗಳ ಪ್ರಕಾರ ಮಾತು ಮತ್ತು ಭಾಷೆಯ ದೋಷಗಳ ಪ್ರಮಾಣವೇನು?
11. ಮಾತು ಮತ್ತು ಭಾಷೆಯಲ್ಲಿ ದೋಷಗಳು ಉಂಟಾಗಲು ಯಾವ ಯಾವ ಅಂಶಗಳು ಕಾರಣಗಳಾಗಿವೆ?
12. ಮಾತಿನ ಅವಯವಗಳ ವೈಫಲ್ಯತೆಗೆ ಕಾರಣವಾಗುವ ಅಂಶಗಳು ಯಾವುವು ?
13. ಒಂದು ಮಗು ಮತ್ತು ವ್ಯಕ್ತಿಯಲ್ಲಿ ಮಾತು ಮತ್ತು ಭಾಷೆಯ ತೊಂದರೆಗಳೆರಡೂ ಸೇರಿಕೊಂಡಿರುವ ಸಾಧ್ಯತೆ ಇದೆಯೆ?
14. ಮಾತು ಮತ್ತು ಭಾಷೆಯ ತೊಂದರೆಗಳ ತೀವ್ರತೆ ಯಾವ ಸ್ಥಿತಿಯಲ್ಲಿ ಅತಿಯಾಗಿರುತ್ತದೆ?
15. ಮಾತು ಮತ್ತು ಭಾಷೆಯ ತೊಂದರೆಗಳ ಗುಣಲಕ್ಷಣಗಳು ಏನು?
16. ಅತಿ ಚಟುವಟಿಕೆ ಸ್ಥಿತಿ ಎಂದರೇನು?
17. ಅತಿ ಚಟುವಟಿಕೆ ಸ್ಥಿತಿಯಿಂದ ಉಂಟಾಗುವ ಭಾಷಾ ದೋಷಗಳು ಯಾವುವು?
18. ಕಲಿಕಾ ನ್ಯೂನತೆ ಎಂದರೇನು?
19. ಕಲಿಕಾ ನ್ಯೂನತೆಯ ಮಕ್ಕಳ ಭಾಷಾ ಬೆಳವಣಿಗೆ ಹೇಗಿರುತ್ತದೆ?
20. ಕಲಿಕಾ ನ್ಯೂನತೆಗೆ ಇರುವ ಕಾರಣಗಳು ಯಾವುವು?
21. ಕಲಿಕಾ ನ್ಯೂನತೆ ಇರುವ ಮಗುವನ್ನು ಹೇಗೆ ಗುರುತಿಸಬಹುದು?
22. ಕಲಿಕಾ ನ್ಯೂನತೆ ಇರುವ ಮಗುವನ್ನು ಚಿಕ್ಕ ವಯಸ್ಸಿನಲ್ಲೆ ಕಂಡುಹಿಡಿಯುವುದರಿಂದ ಆಗುವ ಅನುಕೂಲವೇನು?
23. ಕಲಿಕಾ ನ್ಯೂನತೆ ಇರುವ ಮಕ್ಕಳನ್ನು ತಜ್ಞರಿಗೆ ತೋರಿಸುವುದರಿಂದ ಆಗುವ ಉಪಯೋಗವೇನು?
24. ಕಲಿಕಾನ್ಯೂನತೆ ಇರುವ ಮಕ್ಕಳಲ್ಲಿ ಕಲಿಕೆ ಹೆಚ್ಚು ಫಲಪ್ರದವಾಗುವಂತೆ ಮಾಡುವಲ್ಲಿ ಶಿಕ್ಷಕರ ಮತ್ತು ಪೋಷಕರ ಪಾತ್ರವೇನು?
25. ಮಿದುಳಿನ ಆಘಾತದಿಂದ ಉಂಟಾಗುವ ಭಾಷಾ ನ್ಯೂನತೆಗಳ ಲಕ್ಷಣಗಳು ಯಾವುವು?
26. ಮಿದುಳಿನ ನಿಸ್ಸತ್ವತೆಯಿಂದ ಇಲ್ಲವೇ ಆಘಾತದಿಂದ ಉಂಟಾದ ಭಾಷಾ ನ್ಯೂನತೆಗಳಿಗಿರುವ ಚಿಕಿತ್ಸಾ ಕ್ರಮಗಳು ಏನು?
27. ಮಾತು ಮತ್ತು ಭಾಷಾ ದೋಷಗಳನ್ನು ತಡೆಗಟ್ಟುವುದು ಸಾಧ್ಯವೆ?
28. ಮಾತು ಮತ್ತು ಭಾಷಾ ದೋಷಗಳ ನಿವಾರಣೆಯಲ್ಲಿ ಪೋಷಕರ, ಶಿಕ್ಷಕರ, ಸಮಾಜದ ಜವಾಬ್ದಾರಿ ಏನು?
29. ಮಾತು ಮತ್ತು ಭಾಷಾ ದೋಷವಿರುವ ಮಕ್ಕಳು ಎಲ್ಲರಂತೆ ಶಾಲೆಯಲ್ಲಿ ಕಲಿಯಲು ಸಾಧ್ಯವೇ?

ಅನುಬಂಧ-೧

# ನಿಮ್ಮ ಮಗುವಿನ ಮಾತು ಮತ್ತು ಭಾಷೆಯ ಸಾಮರ್ಥ್ಯವನ್ನು ನೀವೇ ಪರೀಕ್ಷಿಸಿ



## ಮುಂದೆ ನೀಡಿರುವ ತಪಾಸಣಾ ಪಟ್ಟಿಯಲ್ಲಿ ಪ್ರತಿಯೊಂದು ಪ್ರಶ್ನೆಯನ್ನು ಗಮನವಿಟ್ಟು ಓದಿ "ಹೌದು" ಅಥವಾ "ಇಲ್ಲ" ಎಂಬುದನ್ನು ಗುರುತಿಸಿ

ನಿಮ್ಮ ಮಗುವಿನ ವಯಸ್ಸಿಗೆ ಅನುಗುಣವಾಗಿ ನಿಮ್ಮ ಉತ್ತರಗಳನು- ಈ ಕೆಳಗಿನ ಫಲಿತಾಂಶದೊಡನೆ ತಾಳೆ ಹಾಕಿ ನೋಡಿ.

ಎಲ್ಲಾ ಉತ್ತರಗಳು ☐ 'ಹೌದು' ಎಂದಾದಲ್ಲಿ **ಅತ್ಯುತ್ತಮ!** ನಿಮ್ಮ ಮಗುವಿನ ಮಾತು ಹಾಗೂ ಭಾಷೆ ಮತ್ತು ಕೇಳಿಸಿಕೊಳ್ಳುವ ಕೌಶಲ್ಯಗಳು ಸಹಜ ಸ್ಥಿತಿಯಲ್ಲಿದೆ (ತೊಂದರೆಯಿಲ್ಲ).

ಒಂದು / ಎರಡು ಉತ್ತರಗಳು ☐ 'ಇಲ್ಲ' ಎಂದಾದಲ್ಲಿ **ಎಚ್ಚರ!** ನಿಮ್ಮ ಮಗುವಿನ ಮಾತು ಹಾಗೂ ಭಾಷೆ ಮತ್ತು ಕೇಳಿಸಿಕೊಳ್ಳುವ ಕೌಶಲ್ಯದ ಬೆಳವಣಿಗೆಯಲ್ಲಿ ಅಡಚಣೆಯುಂಟಾಗುತ್ತಿದೆ. ಗಮನ ನೀಡಿ.

ಮೂರಕ್ಕಿಂತ ಹೆಚ್ಚು ಉತ್ತರಗಳು ☐ 'ಇಲ್ಲ' ಎಂದಾದಲ್ಲಿ **ಕೂಡಲೆ ಕ್ರಮಕೈಗೊಳ್ಳಿ!** ನಿಮ್ಮ ಮಗುವನು- ಈ ಕೂಡಲೇ ಮಾತು ಮತ್ತು ಭಾಷಾ ತಜ್ಞರ ಬಳಿಗೆ ಕರೆದೊಯ್ಯಿರಿ.

# ನಿಮ್ಮ ಮಗುವಿನ ಮಾತು ಮತ್ತು ಶ್ರವಣದೋಷಗಳ ತಪಾಸಣಾ ಪಟ್ಟಿ

| ಹೌದು | ಇಲ್ಲ | ಮಾತನಾಡುವ ಸಾಮರ್ಥ್ಯ | ಮಗುವಿನ ವಯಸ್ಸು |
|---|---|---|---|
| ☐ | ☐ | ● ಸಂತೋಷವಾಗಿರುವಾಗ ಮಗುವು ಶಬ್ದ ಮಾಡುತ್ತದೆಯೇ ? | ಜನನ |
| ☐ | ☐ | ● ನಿಮ್ಮೊಡನೆ ಆಡುತ್ತಿರುವಾಗ ಮಗುವು ನಿಮ್ಮೆಡೆ ನೋಡಿ, ಬೇರೆಡೆ ಕಣ್ಣು ಹಾಯಿಸಿ, ಪುನಃ ನಿಮ್ಮೆಡೆ ನೋಡುವುದೆ? | |
| ☐ | ☐ | ● ಕೆಲವೊಂದು ಶಬ್ದಗಳನು- ಮಗುವು ಪದೇಪದೇ ಪುನರುಚ್ಛರಿಸುವುದೇ? ಉದಾ: ' ಗೂ' , 'ಈ', ಇತ್ಯಾದಿ | 0–3 ತಿಂಗಳು |
| ☐ | ☐ | ● ತನ- ಬೇರೆ ಬೇರೆ ಅಗತ್ಯಗಳನು- ಪೂರೈಸಿಕೊಳ್ಳಲು ಮಗುವು ಬೇರೆ ಬೇರೇ ರೀತಿಯಲ್ಲಿ ಅಳುವುದೆ? | |
| ☐ | ☐ | ● ನಿಮ್ಮನು- ನೋಡಿದಾಗ ಮಗುವು ಮುಗುಳ-ಗುವುದೆ? | |
| ☐ | ☐ | ● ಮಗುವು ಮಾತನಾಡಲು ಯತಿ-ಸುತ್ತಾ ಪ, ಬ, ಮ ..ಮುಂತಾದ ಶಬ್ದಗಳನು- ಉಪಯೋಗಿಸುತ್ತದೆಯೇ? | 4–6 ತಿಂಗಳು |
| ☐ | ☐ | ● ನಿಮ್ಮಿಂದ ಏನಾದರೂ ಬೇಕಿದ್ದಲ್ಲಿ, ಮಗುವು ಶಬ್ದ ಅಥವಾ ಸಂಜ್ಞೆಗಳ ಮೂಲಕ ತಿಳಿಸಬಲ್ಲದೆ? | |
| ☐ | ☐ | ● ನಿಮ್ಮೊಡನೆ ಆಟವಾಡುವಾಗ ಅಥವ ಒಬ್ಬಂಟಿಯಾಗಿದ್ದಾಗ ಮಗುವು 'ಗುಗೂ', 'ಗಾಗಾ ' ಮುಂತಾದ ಶಬ್ದಗಳನು- ಹೊರಡಿಸುವುದೇ? | |
| ☐ | ☐ | ● ಅಸ್ಪಷ್ಟವಾಗಿಯಾದರೂ 'ಅಮ್ಮ, ಟಾಟಾ, ಬೇಡ 'ಮುಂತಾದ ಶಬ್ದಗಳನು- ಮಗುವು ಉಚ್ಚರಿಸುತ್ತದೆಯೇ? | 7 ತಿಂಗಳಿಂದ 1 ವರ್ಷ |
| ☐ | ☐ | ● ನಿಮ್ಮ ಮಗುವಿನ ತೊದಲು ಮಾತುಗಳು ಚಿಕ್ಕದಿರುತ್ತದೆಯೇ ಅಥವಾ ದೀರ್ಘವಾಗಿರುತ್ತದೆಯೇ? ಉದಾ: ಟಾಟಾ, ಬಾಬಾಬಾ.....ಇತ್ಯಾದಿ. | |
| ☐ | ☐ | ● ಮಗುವು ನಿಮ್ಮ ಮಾತಿನ ಶಬ್ದಗಳ ಅನುಕರಣೆ ಮಾಡುತ್ತದೆಯೇ ? | |
| ☐ | ☐ | ● ನಿಮ್ಮ ಗಮನ ಸೆಳೆಯಲು ಮಗುವು ವಿವಿಧ ರೀತಿಯ ಶಬ್ದಗಳ ಮೂಲಕ ಪ್ರಯತಿ-ಸುತ್ತದೆಯೇ? | |
| ☐ | ☐ | ● ಪ್ರತಿ ತಿಂಗಳು ಹೆಚ್ಚುಹೆಚ್ಚು ಹೊಸ ಪದಗಳನು- ಮಗುವು ಕಲಿತುಕೊಳ್ಳುತ್ತಿದೆಯೇ ? | 1–2 ವರ್ಷಗಳು |
| ☐ | ☐ | ● ಒಂದು ಅಥವ ಎರಡು ಪದಗಳನು-ಳ್ಳ ಪ್ರಶಾ-ರ್ಥಕ ವಾಕ್ಯಗಳನು- ಮಗುವು ಉಪಯೋಗಿಸುತ್ತದೆಯೇ? ಉದಾ: ಅಮ್ಮ ಎಲ್ಲಿ?, ಅದು ಏನು?, ಹೋಗು ? ಇತ್ಯಾದಿ. | |
| ☐ | ☐ | ● ಮಗುವು ಎರಡು ಪದಗಳನು- ಜೋಡಿಸಿ ಮಾತನಾಡುವುದೇ? ಉದಾ: 'ಅಮ್ಮ ಬಾ, ಹಾಲು ಬೇಕು, ನೀರು ಇಲ್ಲ ' ಇತ್ಯಾದಿ. | |
| ☐ | ☐ | ● ಮಗುವು ವ್ಯಂಜನಗಳಿಂದ ಪ್ರಾರಂಭವಾಗುವ ಪದಗಳನು- ಹೆಚ್ಚಾಗಿ ಉಪಯೋಗಿಸುತ್ತದೆಯೇ? | |
| ☐ | ☐ | ● ಪ್ರತಿಯೊಂದು ವಸ್ತು ಅಥವಾ ವ್ಯಕ್ತಿಯ ಹೆಸರು ಹೇಳಿ ಮಗುವು ಗುರುತಿಸಬಲ್ಲದೇ? | 2–3 ವರ್ಷಗಳು |
| ☐ | ☐ | ● ಮಗುವು ತನಗೆ ಬೇಕಾದುದನು- ಕೇಳಲು ಅಥವಾ ಮಾತನಾಡಲು ಎರಡು ಅಥವಾ ಮೂರು ಪದಗಳನು-ಳ್ಳ ವಾಕ್ಯಗಳನು- ಬಳಸುತ್ತದೆಯೇ? | |
| ☐ | ☐ | ● ಮಗುವು ಮಾತನಾಡಿದಾಗ ನಿಮಗೆ ಸ್ಪಷ್ಟವಾಗಿ ಅರ್ಥವಾಗುವುದೇ? | |
| ☐ | ☐ | ● ವಸ್ತುಗಳನು- ಹೆಸರಿಸಿ, ತೋರಿಸಿ, ಮಗುವು ನಿಮ್ಮ ಗಮನ ಸೆಳೆಯಲು ಪ್ರಯತಿ-ಸುವುದೇ? | |
| ☐ | ☐ | ● ಮಗುವು ತನ- ಶಾಲಾ ಚಟುವಟಿಕೆಗಳ ಬಗ್ಗೆ ಅಥವಾ ಸೇಹಿತರ ಬಗ್ಗೆ ನಿಮ್ಮೊಡನೆ ಮಾತನಾಡುವುದೇ? | 3–4 ವರ್ಷಗಳು |
| ☐ | ☐ | ● ಮಗುವು /ರ / , /ಟ / , /ಶ /, /ಳ /ಮುಂತಾದ ಶಬ್ದಗಳನು- ಹೊರತು ಪಡಿಸಿ, ಬೇರೆ ಶಬ್ದಗಳನು- ಸರಿಯಾಗಿ ಉಚ್ಚರಿಸುವುದೇ? | |
| ☐ | ☐ | ● ಮಗುವು ಯಾವುದೇ ಶಬ್ದಗಳನು- / ಪದಗಳನು- ಪುನರುಚ್ಚಿಸದೆ ಸುಲಲಿತವಾಗಿ ಮಾತನಾಡಬಲ್ಲದೇ? | |
| ☐ | ☐ | ● ನಿಮ್ಮ ಮಗುವಿನ ಮಾತು ಹೊಸಬರಿಗೂ ಸ್ಪಷ್ಟವಾಗಿ ಅರ್ಥವಾಗುವುದೇ? | |
| ☐ | ☐ | ● ನಿಮ್ಮ ಮಗುವಿನ ಧ್ವನಿ ಇತರ ಮಕ್ಕಳ ಧ್ವನಿಯಷ್ಟೇ ಸ್ಪಷ್ಟವಾಗಿದೆಯೇ? | 4–41/2 ವರ್ಷಗಳು |
| ☐ | ☐ | ● ನಿಮ್ಮ ಮಗುವು ಬಹಳಷ್ಟು ವಿವರಣೆಗಳನು- ಕೊಡುವ ವಾಕ್ಯಗಳನು- ಬಳಸುವುದೇ? ಉದಾ:' ನನ- ಬಳಿ ಎರಡು ದೊಡ್ಡ ಕೆಂಪು ಬಣ್ಣದ ಗೊಂಬೆಗಳು ಇವೆ '. | |
| ☐ | ☐ | ● ನಿಮ್ಮ ಮಗುವು ಕಥೆಯನು- ಹೇಳುವಾಗ ಕಥಾವಸ್ತುವಿನ ಬಗ್ಗೆ ಹೆಚ್ಚಿನ ವಿವರಗಳನು- ನೀಡುತ್ತದೆಯೇ? | |
| ☐ | ☐ | ● ಮಗುವು ಇತರ ಮಕ್ಕಳು ಮತ್ತು ಹಿರಿಯರ ಜೊತೆ ಸುಲಭವಾಗಿ ಸಂವಾದ ನಡೆಸುವುದೇ? | 41/2–5 ವರ್ಷಗಳು |
| ☐ | ☐ | ● ಮಗುವು ಒಂದೆರಡು ಕ್ಲಿಷ್ಟ ಶಬ್ದಗಳನು- ಹೊರತುಪಡಿಸಿ ಎಲ್ಲಾ ಶಬ್ದಗಳನು- ಸ್ಪಷ್ಟವಾಗಿ ಉಚ್ಚರಿಸಬಲ್ಲದೇ? | |
| ☐ | ☐ | ● ಮಗುವು ಕುಟುಂಬದಲ್ಲಿ ಹಿರಿಯರು ಬಳಸುವ ಭಾಷಾ ವ್ಯಾಕರಣವನು- ಅನುಕರಿಸಿ ವಾಕ್ಯರಚನೆ ಮಾಡುತ್ತದೆಯೇ? | |

# ನಿಮ್ಮ ಮಗುವಿನ ಮಾತು ಮತ್ತು ಶ್ರವಣದೋಷಗಳ ತಪಾಸಣಾ ಪಟ್ಟಿ

| ಹೌದು | ಇಲ್ಲ | ಮಾತನ್ನು ಕೇಳುವ ಮತ್ತು ಅರ್ಥಮಾಡಿಕೊಳ್ಳುವ ಸಾಮರ್ಥ್ಯ | ಮಗುವಿನ ವಯಸ್ಸು |
|---|---|---|---|
| ☐ | ☐ | ● ಮಗುವು ನೀವಾಡುವ ಮಾತುಗಳನು- ಕೇಳಿಸಿಕೊಳ್ಳುತ್ತದೆಯೇ? | ಜನನ |
| ☐ | ☐ | ● ಗದ್ದಲವುಂಟಾದಾಗ ನಿಮ್ಮ ಮಗು ಬೆಚ್ಚುತ್ತದೆಯೇ? | |
| ☐ | ☐ | ● ಮಗುವು ಮಲಗಿದ್ದಾಗ ಜೋರಾಗಿ ಶಬ್ದವಾದರೆ ಎಚ್ಚರಗೊಳ್ಳುತ್ತದೆಯೇ? | |
| ☐ | ☐ | ● ನಿಮ್ಮ ಧ್ವನಿ ಕೇಳಿದಾಗ ಮಗುವು ನಿಮ್ಮ ಕಡೆಗೆ ತಿರುಗುವುದೇ? | 0–3 ತಿಂಗಳು |
| ☐ | ☐ | ● ನೀವು ಮಾತನಾಡಿದಾಗ ಮಗುವು ಮುಗುಳ-ಗುವುದೇ? | |
| ☐ | ☐ | ● ನಿಮ್ಮ ಧ್ವನಿ ಕೇಳಿದಾಗ ಅಳುತ್ತಿರುವ ನಿಮ್ಮ ಮಗು ಶಾಂತವಾಗುವುದೇ? | |
| ☐ | ☐ | ● ನಿಮ್ಮ ಧ್ವನಿಯ ಏರಿಳಿತಗಳನು- ಮಗು ಗ್ರಹಿಸುತ್ತದೆಯೇ? ಉದಾ: ನೀವು ಏರುದನಿಯಲ್ಲಿ 'ಬೇಡ!' ಎಂದು ಹೇಳಿದರೆ ಸುಮ್ಮನಾಗುವುದು ಪ್ರೀತಿಯಿಂದ ಮುದ್ದುಮಾಡಿದಾಗ ನಗುವುದು....ಇತ್ಯಾದಿ | 4–6 ತಿಂಗಳು |
| ☐ | ☐ | ● ಹೊಸ ಶಬ್ದವೊಂದನು- ಕೇಳಿದಾಗ ಶಬ್ದ ಬಂದ ದಿಕ್ಕಿನೆಡೆ ಮಗು ತಿರುಗುತ್ತದೆಯೇ? ಉದಾ: ಕರೆಗಂಟೆ, ದೂರವಾಣಿ ಸದ್ದು, ನಾಯಿ ಬೊಗಳುವುದು...ಇತ್ಯಾದಿ. | |
| ☐ | ☐ | ● ನಿಮ್ಮ ಮಗು ಶಬ್ದಮಾಡುವ ಆಟಿಕೆಗಳ ಕಡೆ ಹೆಚ್ಚು ಗಮನ ಕೊಡುತ್ತದೆಯೇ? | |
| ☐ | ☐ | ● ದಿನಬಳಕೆಯ ವಸ್ತುಗಳನು- ಮಗುವು ಹೆಸರಿಸಿ ಗುರುತಿಸುವುದೇ? ಉದಾ: ಹಾಲು, ಲೋಟ. | 7 ತಿಂಗಳಿಂದ 1 ವರ್ಷ |
| ☐ | ☐ | ● ನಿಮ್ಮ ಕೋರಿಕೆಗಳನು- ಮಗು ಪಾಲಿಸುವುದೇ? ಉದಾ: 'ಇಲ್ಲಿ ಬಾ', 'ನನಗೆ ಕೊಡು ' | |
| ☐ | ☐ | ● ಚಪ್ಪಾಳೆಯಾಟ, ದೂರಿ-ದೂರಿ ದುಗ್ಗಾಲಮ್ಮ, ಡಾ..ಡಾ..ಡಿಕ್ಕಿ, ತಾರಮ್ಮಯ್ಯ.. ಮುಂತಾದ ಶಬ್ದಗಳಿಗೆ ಸಂಬಂಧಿಸಿದ ಆಟಗಳನಾ-ಡಲು ಮಗುವು ಇಷ್ಟಪಡುವುದೇ? | |
| ☐ | ☐ | ● ಮಗುವಿನ ಹೆಸರು ಕರೆದಾಗ ಮಗು ತಿರುಗಿ ನೋಡುವುದೇ? | |
| ☐ | ☐ | ● ನೀವು ಮಾತನಾಡುವಾಗ ಮಗು ನಿಮ್ಮ ಮಾತನು- ಗಮನವಿಟ್ಟು ಕೇಳುವುದೇ? | |
| ☐ | ☐ | ● ಪುಸ್ತಕದಲ್ಲಿರುವ ಚಿತ್ರಗಳನು- ಹೆಸರಿಸಿದಾಗ ಮಗು ಅದನು- ಬೆರಳಿನಿಂದ ತೋರಿಸುತ್ತದೆಯೇ? | 1–2 ವರ್ಷಗಳು |
| ☐ | ☐ | ● ದೇಹದ ಕೆಲವು ಅಂಗಗಳನು- ತೋರಿಸಲು ಕೇಳಿದಾಗ ಮಗುವು ಬೆರಳುಮಾಡಿ ತೋರುವುದೇ? | |
| ☐ | ☐ | ● ನಿಮ್ಮ ಆಜ್ಞೆಗಳನು- / ಸರಳ ಪ್ರಶೆ-ಗಳನು- ಮಗುವು ಅರ್ಥಮಾಡಿಕೊಂಡು ಪಾಲಿಸುವುದೇ? ಉದಾ: 'ಚಪ್ಪಲಿ ಎಲ್ಲಿದೆ?' , 'ಚೆಂಡು ಎಸೆ !' ಇತ್ಯಾದಿ. | |
| ☐ | ☐ | ● ಸರಳ ಕಥೆಗಳನು-, ಪ್ರಾಸಪೂರ್ಣ ಪದ್ಯಗಳನು- ಹಾಗೂ ಕಿವಿಗೆ ಹಿತವಾಗುವ ಸಂಗೀತವನು- ಮಗುವು ಉತ್ಸಾಹದಿಂದ ಕೇಳುತ್ತದೆಯೇ? | |
| ☐ | ☐ | ● ಪದಗಳ ನಡುವಿರುವ ವ್ಯತ್ಯಾಸವನು- ಮಗುವು ಅರಿತುಕೊಳ್ಳುತ್ತದೆಯೇ? ಉದಾ : 'ಮೇಲೆ-ಕೆಳಗೆ ', 'ಒಳಗೆ-ಹೊರಗೆ ', 'ದೊಡ್ಡ-ಚಿಕ್ಕ ', 'ಹೋಗು-ಬಾ' ಇತ್ಯಾದಿ. | 2–3 ವರ್ಷಗಳು |
| ☐ | ☐ | ● ಮಗುವು ಶಬ್ದಗಳನು- ಗಮನವಿಟ್ಟು ಆಲಿಸುತ್ತದೆಯೇ? ಉದಾ: ದೂರವಾಣಿ, ಟಿ.ವಿ, ಕರೆಗಂಟೆಗಳ ಶಬ್ದ, ಬಾಗಿಲು ಬಡಿಯುವ ಶಬ್ದ, ನಾಯಿ ಬೊಗಳುವ ಶಬ್ದ ಇತ್ಯಾದಿ. | |
| ☐ | ☐ | ● ಎರಡು ಕೋರಿಕೆಗಳನು- ಒಳಗೊಂಡ ನಿಮ್ಮ ಮಾತನು- ಮಗುವು ಪಾಲಿಸಬಲ್ಲದೇ?ಉದಾ: 'ಲೋಟವನು- ತೆಗೆದುಕೊಂಡು ಮೇಜಿನ ಮೇಲಿಡು'. | |
| ☐ | ☐ | ● ನೀವು ಬೇರೊಂದು ಕೊಠಡಿಯಿಂದ ಕರೆದಾಗ ನಿಮ್ಮ ಮಗು ಕೇಳಿಸಿಕೊಳ್ಳುತ್ತದೆಯೇ? | 3–4 ವರ್ಷಗಳು |
| ☐ | ☐ | ● ಕುಟುಂಬದವರು ಸಾಮಾನ್ಯವಾಗಿ ಕೇಳುವ ರೇಡಿಯೋ, ದೂರದರ್ಶನದ ಕಾರ್ಯಕ್ರಮದ ಶಬ್ದದ ಮಿತಿಯಲ್ಲೇ ಮಗುವೂ ಕೂಡ ಕೇಳಿಸಿಕೊಳ್ಳಬಲ್ಲದೇ? | |
| ☐ | ☐ | ● 'ಯಾಕೆ? ', 'ಏನು? ', 'ಎಲ್ಲಿ? ', 'ಯಾರು? ', ಮುಂತಾದ ಸರಳವಾದ ಪ್ರಶೆ-ಗಳನು- ಮಗುವು ಅರ್ಥ ಮಾಡಿಕೊಳ್ಳಬಲ್ಲದೇ? | |
| ☐ | ☐ | ● ಮನೆಯಲ್ಲಿ ಹಾಗು ಶಾಲೆಯಲ್ಲಿ ಹೇಳಿದ ವಿಷಯಗಳನೆ-ಲ್ಲ ಮಗುವು ಕೇಳಿಸಿಕೊಂಡು ಅರ್ಥಮಾಡಿಕೊಳ್ಳುತ್ತದೆಯೇ? | 4–5 ವರ್ಷಗಳು |
| ☐ | ☐ | ● ನಿಮ್ಮ ಮಗುವಿಗೆ ಬಹುಷಃ ಕಿವಿ ಸರಿಯಾಗಿ ಕೇಳುತ್ತಿಲ್ಲ ಎಂದು ಸುತ್ತಮುತ್ತಲಿರುವವರು (ಉದಾ: ಅಜ್ಜಿ. ಅಕ್ಕ, ಶಿಕ್ಷಕಿ, ದಾದಿ, ಸೆ-ೀಹಿತರು.....ಇತ್ಯಾದಿ) ಅಭಿಪ್ರಾಯ ಪಡುತ್ತಾರೆಯೇ? | |
| ☐ | ☐ | ● ನೀವು ಹೇಳಿದ ಕಥೆಯನು- ಮಗುವು ಗಮನವಿಟ್ಟು ಆಲಿಸಿ, ನಂತರ ನೀವು ಕಥೆಯ ಬಗ್ಗೆ ಕೇಳುವ ಸರಳ ಪ್ರಶೆ-ಗಳಿಗೆ ಉತ್ತರ ನೀಡುತ್ತದೆಯೇ? | |

## ನಮ್ಮ ಸಂಸ್ಥೆಯ ಜನಶಿಕ್ಷಣ ಸಾಹಿತ್ಯದ ಪ್ರಕಟಣೆಗಳು

| | |
|---|---|
| ■ ಶ್ರವಣನ್ಯೂನತೆಯುಳ್ಳ ಮಕ್ಕಳ ಪೋಷಕರಿಗೆ ಕೈಪಿಡಿ | ರೂ. 10/- |
| ■ ಸೀಳು ತುಟಿ ಹಾಗೂ ಸೀಳು ಅಂಗಳು–ಪೋಷಕರಿಗೊಂದು ಕೈಪಿಡಿ | ರೂ. 10/- |
| ■ ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳಿಗಾಗಿ ಸಂಕಲಿತ ಆಟಿಕೆಗಳು –ಬಳಸುವವರ ಕೈಪಿಡಿ | ರೂ. 50/- |
| ■ ಶಾಲಾಪೂರ್ವ ತರಬೇತಿ ಕಾರ್ಯಕ್ರಮಗಳು | ರೂ. 10/- |
| ■ ಶ್ರವಣದೋಷ ತಡೆಗಟ್ಟುವಿಕೆಗೆ ಅನುಸರಿಸಬೇಕಾದ ಕ್ರಮಗಳು | ರೂ. 10/- |
| ■ ನಮ್ಮ ಮನೆಯಂಗಳದ ಹೂವು – ಸಚಿತ್ರ ಪುಸ್ತಕ | ರೂ. 15/- |
| ■ ಕಿವಿಮಾತು – ಕಿರುನಾಟಕ | ರೂ. 15/- |
| ■ ಸಫಲತೆಗಿದುವೆ ಸರಿದಾರಿ – ಬೀದಿನಾಟಕ | ರೂ. 15/- |
| ■ ಮೋನಿ ನಿಜಕೂ ಧೀರ – ಕಥನ ಗೀತೆ | ರೂ. 15/- |
| ■ ಪತ್ರ ಹೇಳದ ಕಥೆ – ಕಥನ ಪುಸ್ತಕ | ರೂ. 15/- |
| ■ ನಮ್ಮೊಳಗೊಬ್ಬರು – ಕಥನ ಪುಸ್ತಕ | ರೂ. 15/- |

| | |
|---|---|
| ■ **25 Golden Rules for Parents of Children with Hearing Impairment** | **Rs. 10/-** |
| ■ **Preschool Training Program for Children with Communication Disorders** | **Rs. 10/-** |
| ■ **Break the Barrier of Silence – Cochlear Implant** | **Rs. 25/-** |
| ■ **Things You Always Wanted to Know About Learning Disability** | **Rs. 25/-** |
| ■ **Toy Kit for Kids with Developmental Disabilities** | **Rs. 50/-** |

# ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ, ಮೈಸೂರು

ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಇಂದು ದೇಶವು ಹೆಮ್ಮೆಪಡುವಂತಹ ಸಂಸ್ಥೆಯಾಗಿ ಬೆಳೆದು ನಿಂತಿದೆ. ಈ ಸಂಸ್ಥೆಯು ಕಳೆದ ನಾಲ್ಕು ದಶಕಗಳಿಂದ ವಾಕ್-ಶ್ರವಣ ನ್ಯೂನತೆಯುಳ್ಳ ಜನರ ಸೇವೆಗೆ ಕಟಿಬದ್ಧವಾಗಿ ನಿಂತಿದೆ. ಸಂಶೋಧನೆ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಗಳನ್ನು ಮಾಡಿದೆ. ಸಂಸ್ಥಯ ಶಾಲಾಪೂರ್ವ ತರಬೇತಿ ಕೇಂದ್ರದಲ್ಲಿ ವಾಕ್-ಶ್ರವಣ ನ್ಯೂನತೆಗಳುಳ್ಳ ಮಕ್ಕಳನ್ನು ಸಾಮಾನ್ಯ ಶಾಲೆಗಳಿಗೆ ಪ್ರವೇಶ ಪಡೆಯಲು ಅರ್ಹರನ್ನಾಗಿ ಮಾಡಲು ತರಬೇತಿ ನೀಡಲಾಗುತ್ತಿದೆ. ಸಂಸ್ಥಯಲ್ಲಿ ವಾಕ್-ಶ್ರವಣ ನ್ಯೂನತೆಗಳುಳ್ಳ ಮಕ್ಕಳು 'ಅಂಗವಿಕಲರು' ಎನ್ನಿಸಿಕೊಳ್ಳುವುದಿಲ್ಲ. ಇಂತಹ ಮಕ್ಕಳನ್ನು 'ವಿಶೇಷ ಅರ್ಹತೆಯುಳ್ಳವರು' ಎಂದು ಪರಿಗಣಿಸಲಾಗುತ್ತದೆ. ಮಕ್ಕಳಲ್ಲಿರುವ ಈ 'ವಿಶೇಷ ಅರ್ಹತೆಗಳನ್ನು' ಬೆಳಸಿ ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದು ನಮ್ಮ ಸಂಸ್ಥೆಯ ಮುಖ್ಯ ಆಶಯ. ಈ ನಿಟ್ಟಿನಲ್ಲಿ ನಿಮ್ಮ ಸಹಕಾರ ಬಹಳ ಮುಖ್ಯ.




**ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ**

ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು - 570006

ದೂರವಾಣಿ: 2514449, 2515410, 2515805 ಟೆಲಿಫ್ಯಾಕ್ಸ್: 2510515

ಇ-ಮೇಲ್:aiish_dir@yahoo.com ವೆಬ್‌ಸೈಟ್: www.aiishmysore.com